ಸಾರ್ವತ್ರಿಕ ಲಸಿಕೆ ನೀಡುವ ಕಾರ್ಯಕ್ರಮ

# ಆರೋಗ್ಯ ಕಾರ್ಯಕರ್ತರ ಕೈಪಿಡಿ

ನವಂಬರ್ 1985

ವಿಸ್ತರಿತ ಸೋಂಕು ಪ್ರತಿರಕ್ಷಣ ಕಾರ್ಯಕ್ರಮ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ
ಬೆಂಗಳೂರು -560009



# ಸಾರ್ವತ್ರಿಕ ಲಸಿಕೆ ನೀಡುವ ಕಾರ್ಯಕ್ರಮ

ಲಸಿಕೆ ನೀಡುವಿಕೆ, ಒಂದು ಮುಖ್ಯ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮ. ಈ ಕಾರ್ಯಕ್ರಮದಲ್ಲಿ ಗರ್ಭಿಣಿಯರು ಎಳೆಕೂಸುಗಳು ಮತ್ತು ಮಕ್ಕಳಿಗೆ ಗಂಟಲುಬೇನೆ, ನಾಯಿಕೆಮ್ಮು, ಧನುರ್ವಾತ ನರಮಂಡಲರೋಗ ಬಾಲ್ಯ ಕ್ಷಯ, ದಡಾರ ಮತ್ತು ವಿಷಮಶೀತಜ್ವರ ದಂತಹ ಅಪಾಯಕಾರಿ ರೋಗಗಳ ವಿರುದ್ಧ ರಕ್ಷಣೆಗಾಗಿ ಲಸಿಕೆಗಳನ್ನು ನೀಡಲಾಗುತ್ತಿದೆ. ಲಸಿಕೆ ನೀಡುವ ಸೇವೆಗಳನ್ನು ಹಂತ-ಹಂತವಾಗಿ ವಿಸ್ತರಿಸಿ 1990 ರ ವೇಳೆಗೆ ಎಲ್ಲ ಅರ್ಹ ಮಕ್ಕಳನ್ನೂ ರಕ್ಷಿಸಲು ಉದ್ದೇಶಿಸಿದೆ. 1985-86ರಲ್ಲಿ ರಾಷ್ಟ್ರದ 30 ಜಿಲ್ಲೆಗಳು ಮತ್ತು 50 ವೈದ್ಯಕೀಯ ಮ ಹಾ ವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಎಲ್ಲ ಅರ್ಹ ಜನಸಂಖ್ಯೆಗಳೂ ಸಾರ್ವತ್ರಿಕ ಲಸಿಕೆ ನೀಡುವ ಕಾರ್ಯಕ್ರಮ ಹಾಕಲಾಗಿದೆ.

ಲಸಿಕೆ ನೀಡುವ ಕಾರ್ಯಕ್ರಮ ಜಟಿಲವಾಗಿದ್ದು, ವಿವಿಧ ಹಂತಗಳಲ್ಲಿ ನಾನಾ ಕಾರ್ಯಕ್ರಮಗಳಲ್ಲಿ ತೊಡಗಿರುವ ಸಿಬ್ಬಂದಿಯ ಮಧ್ಯೆ ನಿಕಟ ಸಮನ್ವಯ ಅಗತ್ಯವಾಗುತ್ತದೆ. ಈ ಕಾರ್ಯಗಳನ್ನು ಸರಿಯಾಗಿ ಮಾಡುವುದೇ ಅಲ್ಲದೆ, ಪರಸ್ಪರ ಸಂಬಂಧಿಸಿದಂತೆ ಸಕಾಲದಲ್ಲೂ ಆಗಬೇಕು. ಕಾರ್ಯನಿರ್ವಾಹಕರು ತಮ್ಮ ಕಾರ್ಯ ಜವಾಬ್ದಾರಿಗಳನ್ನು ಅರಿತಿರುವುದಷ್ಟೇ ಅಲ್ಲದೆ ತಂಡಗಳಲ್ಲಿ ಕೆಲಸಮಾಡಲು ಅಗತ್ಯ ತರಬೇತಿ ಮತ್ತು ಪ್ರೇರಣೆಯನ್ನು ಪಡೆದಿರುವುದೂ ಮುಖ್ಯವಾದದ್ದು. ಲಸಿಕೆ ನೀಡುವ ಕಾರ್ಯಕ್ರಮದಲ್ಲಿ ತೊಡಗಿರುವ ಎಲ್ಲಾ ಕೆಲಸವೂ ಅಷ್ಟೆ ಪ್ರಾಮುಖ್ಯತೆ ಹೊಂದಿರುವುದಲ್ಲದೆ ಕೇವಲ ಒಬ್ಬ ಸರಿಯಾಗಿ ಕೆಲಸಮಾಡದಿದ್ದರೂ, ಉಳಿದವರೆಲ್ಲರ ಪ್ರಯತ್ನಗಳು ವ್ಯರ್ಥವಾಗಬಹುದು.

ಕಾರ್ಯಕ್ರಮದ ಸುಗಮ ಹಾಗೂ ಪರಿಣಾಮಕಾರಿ ನಿರ್ವಹಣೆಯ ದೃಷ್ಟಿಯಿಂದ ಲಸಿಕೆ ನೀಡುವ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಬರುವ ಎಲ್ಲ ವರ್ಗದ ಸಿಬ್ಬಂದಿಗೂ ಪುನರ್ ನಿರ್ದೇಶಿತ ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ಗರ್ಭಿಣಿಯರು, ಎಳೆ ಕೂಸುಗಳು ಮತ್ತು ಮಕ್ಕಳಿಗೆ ಲಸಿಕೆ ನೀಡುವ ನೇರ ಜವಾಬ್ದಾರಿ ಇರುವ ಆರೋಗ್ಯ ಕಾರ್ಯಕರ್ತರಿಗಾಗಿ ಈ ಕೈಪಿಡಿಯನ್ನು ತಯಾರಿಸಲಾಗಿದೆ ಮತ್ತು ಕಾರ್ಯಕ್ರಮದ ವಿವಿಧ ವಿಷಯಗಳನ್ನು ಒಳಗೊಡಿಸಲಾಗಿದೆ. ಈ ಕೈಪಿಡಿಯನ್ನು ತರಬೇತಿಯಲ್ಲಿ ಪಾಲುಗೊಳ್ಳುವವರು ಸಣ್ಣ ಗುಂಪುಗಳಲ್ಲಿ ಓದಿ ನಾನಾ ಸಲಕರಣೆಗಳ ಪ್ರತ್ಯಕ್ಷಿಕಗಳ ಮೂಲಕ ಲಸಿಕೆ ನಿರ್ವಹಣೆ, ಸಂಗ್ರಹಣೆ ಮತ್ತು ನೀಡುವಿಕೆಗಳು ವಿಧಾನಗಳನ್ನು ತಿಳಿದುಕೊಳ್ಳಬೇಕು.






# 1. ಲಸಿಕೆಗಳು ಮತ್ತು ಅವುಗಳನ್ನು ಕೊಡುವುದು ಯಾವಾಗ

## 1.1 ರೋಗಪ್ರತಿರೋಧಕ ಶಕ್ತಿ

ನಿಮಗೆ ದಡಾರ ಒಂದು ಸಲ ಬಂದರೆ, ಮತ್ತೊಮ್ಮೆ ಬಾರದು. ನಿಮ್ಮ ದೇಹ ದಡಾರಕ್ಕೆ ಪ್ರತಿರೋಧಕವಾಗಿದೆ. ನಿಮ್ಮ ದೇಹಕ್ಕೆ ಯಾವುದೇ ಸೋಂಕು ಬಂದಾಗ ಅದು ಆ ಸೋಂಕಿಗೆ ಕಾರಣವಾದ ರೋಗಾಣುಗಳ ವಿರುದ್ಧ ಪ್ರತಿರೋಧಕಗಳನ್ನು ತಯಾರಿಸುತ್ತದೆ. ಈ ಪ್ರತಿ ರೋಧಕಗಳು ಸೂಕ್ಷ್ಮ ರೋಗಾಣುಗಳನ್ನು ಸಾಯಿಸಿ, ನಿಮ್ಮ ದೇಹದಲ್ಲಿ ಅವು ಮತ್ತೆ ಬೆಳೆಯದಂತೆ ತಡೆಯುತ್ತವೆ. ಈ ಪ್ರತಿರೋಧಕಗಳು ಕೇವಲ ನಿರ್ದಿಷ್ಟ ಸೋಂಕಿನ ವಿರುದ್ಧ ಕೆಲಸಮಾಡುತ್ತವೆಯೇ ಹೊರತು ಇತರ ರೋಗಾಣುಗಳ ವಿರುದ್ಧವಲ್ಲ.

ಜೀವನದ ಮೊದಲ ಕೆಲವು ತಿಂಗಳ ಕಾಲ ತಾಯಿಯಿಂದ ಪಡೆದ ಪ್ರತಿರೋಧಕಗಳು ಮಗುವನ್ನು ಅನೇಕ ಸೋಂಕುಗಳ ವಿರುದ್ಧ ರಕ್ಷಿಸುತ್ತವೆ. ತಾಯಿಯ ರಕ್ತದಿಂದ ಬರುವ ಪ್ರತಿರೋಧಕಗಳು, ಮಗು ಜನಿಸುವ ಮುಂಚೆ ಮಾಂಸ (Placenta) ದ ಮುಖಾಂತರ ಮಗುವಿನ ದೇಹವನ್ನು ಸೇರುತ್ತವೆ. ತಾಯಿ ಹಾಲಿನಲ್ಲಿ, ಅದರಲ್ಲೂ ಪ್ರಥಮ ಸ್ತನ್ಯದಲ್ಲಿ (ಮೊದಲಿನ 3–4 ದಿವಸಗಳ ಎದೆ ಹಾಲು) ಪ್ರತಿರೋಧಕಗಳಿದ್ದು, ಮಗುವನ್ನು ಅತಿಸಾರ ಮತ್ತಿತರ ರೋಗ ಸೋಂಕುಗಳ ವಿರುದ್ಧ ರಕ್ಷಿಸಲು ನೆರವಾಗುತ್ತದೆ.



ಚಿತ್ರ 1.1 ನರಮಜ್ಜೆಯಿಂದ ಕುಂಟನಾದ ಒಂದು ಮಗು

## 1.2 ಗುರಿಯಿಟ್ಟುಕೊಂಡಿರುವ ಏಳು ರೋಗಗಳು

ಕೆಲವು ಮಕ್ಕಳು ಬದುಕಿ ರಕ್ಷಿತವಾಗಿ ಉಳಿದರೂ ಅನೇಕ ಮಕ್ಕಳನ್ನು ಸಾಯಿಸಬಲ್ಲ ಅಥವಾ ಕುಂಠಿತ ಗೊಳಿಸಬಲ್ಲ ಅತ್ಯಂತ ಅಪಾಯ ಕಾರಿಯಾದ ಏಳು ಮುಖ್ಯ ಸೋಂಕು ಕಾಯಿಲೆಗಳಿವೆ.
ಈ ಏಳು ಕಾಯಿಲೆಗಳೆಂದರೆ ;

* ಧನುರ್ವಾತ ಅಥವಾ ಜಿಲ್ಲು ರೋಗ (ಟೆಟೆನಸ್)
* ನರಮಜ್ಜೆರೋಗ (ಪೋಲಿಯೋ)
* ಗಂಟಲುಮಾರಿ (ಡಿಫ್ತೀರಿಯಾ)
* ನಾಯಿ ಕೆಮ್ಮು ಅಥವಾ ಕೋಡಗೆಮ್ಮು, ಎಪ್ಪತ್ತಿನ ಕೆಮ್ಮು (ಪರಟೂಸಿಸ್, ಹೂಪಿಂಗ್ ಕಫ್)
* ದಡಾರ ಅಥವಾ ಗೊಬ್ಬರ ಅಥವಾ ತಟ್ಟು, ಹೊಟ್ಟು (ಮೀಸಲ್ಸ್)
* ಬಾಲ್ಯ ಕ್ಷಯ (ಟಿ. ಬಿ.), ಮತ್ತು
* ವಿಷಮಶೀತ ಜ್ವರ (ಟೈಫಾಯಿಡ್)

ಈ ರೋಗಗಳ ಒಂದು ವಿಶೇಷ ವೆಂದರೆ ಲಸಿಕೆ ನೀಡುವುದರಿಂದ ಅವುಗಳನ್ನು ತಡೆಗಟ್ಟಬಹುದು. ನಾವು ಮಗುವಿಗೆ ಲಸಿಕೆ, ಎಂದರೆ ರೋಗ ಉಂಟುಮಾಡುವ ಸೂಕ್ಷ್ಮ ಕ್ರಿಮಿಗಳ ದುರ್ಬಲಗೊಳಿಸಿದ ಒಂದು ರೂಪವನ್ನು ಚುಚ್ಚು ಮದ್ದಿನ ಮೂಲಕವಾಗಿಯಾಗಲೀ ಅಥವಾ ಹನಿಗಳಾಗಿ ಬಾಯಿ ಮೂಲಕವಾಗಿಯಾಗಲೀ ಹಾಕುತ್ತೇವೆ. ಈ ಲಸಿಕೆಯು ಮಗುವಿನ ದೇಹದಲ್ಲಿ ಪ್ರತಿರೋಧಕಗಳು ಉಂಟಾಗುವಂತೆ ಮಾಡುತ್ತದೆ ಆದರೆ ಮಗುವಿಗೆ ರೋಗ ಉಂಟುಮಾಡುವುದಿಲ್ಲ. ಆದ್ದರಿಂದ ಮಗುವಿಗೆ ಕಾಯಿಲೆಯಾಗಿದೆ ರೋಗದ ವಿರುದ್ಧ ಪ್ರತಿರೋಧಕ ಶಕ್ತಿಯನ್ನು ಪಡೆಯುತ್ತಾರೆ.

## 1.3 ರಾಷ್ಟ್ರೀಯ ಲಸಿಕೆ ನೀಡುವ ವೇಳಾ ಪಟ್ಟಿ

ಪ್ರತಿಯೊಂದು ರಾಷ್ಟ್ರವೂ ಅಲ್ಲಿನ ಸಾಂಕ್ರಾಮಿಕ ರೋಗ ವಿಧಾನ, ದೊರೆಯುವ ಲಸಿಕೆಗಳು ಮತ್ತು ಆಡಳಿತಾತ್ಮಕ ಹಾಗೂ ಆರ್ಥಿಕ ಸೇವಾ ಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ತನ್ನದೇ ಆದ ಲಸಿಕೆ ನೀಡುವ ವೇಳಾ ಪಟ್ಟಿಯನ್ನು ರೂಪಿಸುತ್ತದೆ. ನಮ್ಮ ದೇಶದಲ್ಲಿ ಕೆಳಕಂಡ ವೇಳಾ ಪಟ್ಟಿಯನ್ನು ಶಿಫಾರಸಲಾಗಿದೆ.

| ಫಲಾನುಭವಿಗಳು | ವಯಸ್ಸು | ಲಸಿಕೆ | ಎಷ್ಟು ಸಲ ಕೊಡುವುದು |
|---|---|---|---|
| ಗರ್ಭಿಣಿಯರು | 16–36 ವಾರಗಳು | ಟಿ ಟಿ (ಧ.ವಾ) | 1 * |
| ಎಳೆ ಕೂಸುಗಳು | 3–9 ತಿಂಗಳು | i ತ್ರಿ. ರೋ. ಸಂ. (ಗಂ. ನಾ. ಧ.) (ಡಿಪಿಟಿ) | 3 |
| | | ii ನರಮಜ್ಜೆ ನಿರೋಧಕ (ಪೋಲಿಯೋ) | 3 |
| | | iii ಕ್ಷಯ ನಿರೋಧಕ (ಬಿ.ಸಿ.ಜಿ.) | 1 |
| | 9-12 ತಿಂಗಳು | ದಡಾರ | 1 |
| | 18-24 ತಿಂಗಳು | ಡಿಪಿಟಿ (ಗಂ.ನಾ.ಧ.) | 1 |
| | | ಪೋಲಿಯೋ (ನ. ನಿ.) | 1 |

| | | | |
|---|---|---|---|
| ಮಕ್ಕಳು | 5–6 ವರ್ಷಗಳು | ಡಿ. ಟಿ. (ಗ. ಧ) | 1 * |
| | | ವಿಷಮಶೀತಜ್ವರ ನಿರೋಧಕ<br>ಟೈಫಾಯಿಡ್ (ವಿ.ಶೀ.ನಿ.) | 2 |
| | 10 ವರ್ಷಗಳು | ಟಿ. ಟಿ. (ಧ.) | 1 * |
| | | ಟೈಫಾಯಿಡ್ (ವಿ. ಶೀ. ನಿ.) | 1 * |
| | 16 ವರ್ಷಗಳು | ಟಿ. ಟಿ. (ಧ.) | 1 * |
| | | ಟೈಫಾಯಿಡ್ (ವಿ. ಶೀ.ನಿ.) | 1 * |
| | * ಬಲವರ್ಧಕ, ಈ ಮುಂಚೆ ಕೊಟ್ಟಿರದಿದ್ದರೆ ಎರಡು ಸಲ ಕೊಡಿ. | | |

**ಟಿಪ್ಪಣಿಗಳು**

— ಒಂದು ಸಲದಿಂದ ಮತ್ತೊಂದು ಸಲ ಲಸಿಕೆ ಕೊಡುವಮಧ್ಯದ ಅಂತರ 1 ತಿಂಗಳಿಗಿಂತ ಕಡಿಮೆ ಇರಬಾರದು.

— ಅಪೌಷ್ಟಿಕತೆ, ಕಡಿಮೆ ಪ್ರಮಾಣದ ಜ್ವರ ಸಾಧಾರಣ ಶ್ವಾಸನಳಿಕಾ ಸೋಂಕುಗಳು ಅಥವಾ ಮತ್ತೀತರ ಸಣ್ಣ-ಪುಟ್ಟ ಕಾಯಿಲೆಗಳು, ಲಸಿಕೆ ನೀಡಲು ಬಾಧಕ ಲಕ್ಷಣಗಳೇನಲ್ಲ.

— ಪ್ರತಿಯೊಂದು ಲಸಿಕೆಯನ್ನು ಶಿಫಾರಸು ಮಾಡಿದಷ್ಟು ಸಲ ಸಾಧ್ಯವಾದಷ್ಟು ಬೇಗ ಕೊಟ್ಟು ಮುಗಿಸಬೇಕು. ಯಾವುದೇ ಕಾರಣಗಳಿಂದ ಎರಡನೇ ಅಥವಾ ಮೂರನೆ ಸಲದ ಲಸಿಕೆಯನ್ನು ಮಗುವಿಗೆ ವೇಳಾ ಪಟ್ಟಿಯ ಪ್ರಕಾರ ಸಕಾಲದಲ್ಲಿ (4 ರಿಂದ 8 ವಾರಗಳಲ್ಲಿ) ನೀಡಿರದಿದ್ದರೆ ಆದಷ್ಟು ಬೇಗ ಕೊಡಿಸಬೇಕು ಆದರೆ ಮೊದಲಿನಿಂದ ಮತ್ತೆ ಪ್ರಾರಂಭಿಸಬಾರದು.

— ಡಿ.ಪಿ.ಟಿ. ಮತ್ತು ಪೋಲಿಯೋ ಲಸಿಕೆಗಳನ್ನು ಜೊತೆಯಾಗಿ ಕೊಡಬೇಕು. ಮೇಲಿನ ಲಸಿಕೆಗಳನ್ನು ಕೊಡುವ ಮೂರು ಸರದಿಗಳಲ್ಲಿ ಯಾವುದರ ಜೊತೆಗಾದರೂ ಬಿ.ಸಿ.ಜಿ. ಲಸಿಕೆಯನ್ನು ಕೊಡಬಹುದು. ಆದರೆ ಬಿ. ಸಿ. ಜಿ. ಮತ್ತು ಡಿ. ಪಿ. ಟಿ. ಚುಚ್ಚುಗಳನ್ನು ಬೇರೆ-ಬೇರೆ ಸ್ಥಳಗಳಲ್ಲಿ ಕೊಡಬೇಕು.

— ಬಾಯಿಯಲ್ಲಿ ಹಾಕುವ ಪೋಲಿಯೋ ಲಸಿಕೆಗೆ ಭೇದಿಯು ಬಾಧಕ ಲಕ್ಷಣವಲ್ಲ. ಆದರೆ ಪೂರ್ಣ ರಕ್ಷಣೆಯ ದೃಷ್ಟಿಯಿಂದ ಭೇದಿ ಇರುವಾಗ ಹಾಕಿದ ಸರದಿಗಳನ್ನು ಒಟ್ಟು ಸರದಿ ಲೆಕ್ಕದಲ್ಲಿ ಸೇರಿಸಬಾರದು. ಭೇದಿ ಕಡಿಮೆ ಆದ ನಂತರ ಆದಷ್ಟು ಬೇಗ ಇನ್ನೊಂದು ಸಲ ಲಸಿಕೆ ಕೊಡಿ.

— ಸಾಮಾನ್ಯವಾಗಿ ಸೌಮ್ಯ ಹಾಗೂ ಅಲ್ಪಾವಧಿಯ ಲಸಿಕೆ ನೀಡಿದ ನಂತರದ ಕಾಣಿಸಿಕೊಳ್ಳಬಹುದಾದ ಪ್ರತಿಕ್ರಿಯೆಗಳು :—

* ಸಾಧಾರಣ ಜ್ವರ
* ಚುಚ್ಚು ನೀಡಿದ ಸ್ಥಳದಲ್ಲಿ ನೋವು ಮತ್ತು ಊತ
* ದಡಾರ ಲಸಿಕೆ ನೀಡಿದ ನಂತರ ತಾತ್ಕಾಲಿಕ ಗುಳ್ಳೆಗಳೇಳುವುದು.
* ಬಿ. ಸಿ, ಜಿ. ನೀಡಿದ 3–4 ವಾರಗಳಲ್ಲಿ ಒಂದು ಸಣ್ಣ ಗಡ್ಡೆ ಕಾಣಿಸಿಕೊಳ್ಳುತ್ತದೆ. ಅದರಲ್ಲಿ ಸಾಮಾನ್ಯವಾಗಿ ನೋವಿರುವುದಿಲ್ಲ, ಆದರೆ ಮುಟ್ಟಿದರೆ ನೋವಾಗಬಹುದು. ಈ ಗಡ್ಡೆ ಕ್ರಮೇಣವಾಗಿ ದೊಡ್ಡದಾಗಿ 6 ವಾರಗಳಲ್ಲಿ 6–10 ಮಿ. ಮೀ ವ್ಯಾಸದ ಗಾತ್ರದ್ದಾಗಬಹುದು ಈ ಗಡ್ಡೆ ಕೀವು ತುಂಬುವುದರಿಂದ ಮೆತ್ತಗಾಗುತ್ತದೆ. ಇದಕ್ಕೆ ಯಾವ ಉಪಚಾರದ ಅವಶ್ಯಕತೆಯೂ ಇರುವುದಿಲ್ಲ. 10–12 ವಾರದ ಕೊನೆಗೆ ಒಂದು ಸಣ್ಣ ಕಲೆ ಮಾತ್ರ ಕಾಣುತ್ತಿರುತ್ತದೆ.

ಅಪರೂಪದ ಪ್ರಕರಣಗಳಲ್ಲಿ ಡಿಪಿಟಿ ಲಸಿಕೆ ಚುಚ್ಚಿದ ನಂತರ ಮೈನಡುಕ ಮತ್ತು ಮೂರ್ಛೆ. ಅಂತಹ ಪ್ರಕರಣಗಳಲ್ಲಿ ಮತ್ತೆ ಡಿಪಿಟಿ ಲಸಿಕೆ ಕೊಡುವುದನ್ನು ನಿಲ್ಲಿಸಿ. ವೈದ್ಯರೊಡನೆ ಸಮಾಲೋಚಿಸಿ.

ಸಾಮಾನ್ಯವಾಗಿ ಸೂಜಿ ಮತ್ತು ಸಿರಿಂಜುಗಳನ್ನು ಸರಿಯಾಗಿ ಸಂಸ್ಕರಿಸದಿರುವುದರಿಂದ ಚುಚ್ಚಿದ ಸ್ಥಳದಲ್ಲಿ ಊತ ಮತ್ತು ಕೀವಾಗುವುದು. ಸೂಜಿಗಳು ಮೊಂಡವಾಗಿದ್ದರೆ ಅಥವಾ ಮಣೆದಿದ್ದರೆ ಚುಚ್ಚುವಾಗ ನೋವಾಗಬಹುದು.

ಪಾಲಕರಿಗೆ ಲಸಿಕೆಗಳ ಪ್ರತಿಕ್ರಿಯೆಗಳ ಬಗ್ಗೆ ತಿಳಿಸಿದ್ದರೆ ಅವರು ಚಿಂತಿಸುವುದಿಲ್ಲ. ಅವರಿಗೆ ಯಾವುದೇ ಕಾತರ ಉಂಟಾದರೆ ಆರೋಗ್ಯ ಕೇಂದ್ರಕ್ಕೆ ಬಂದು ತೋರಿಸಿಕೊಳ್ಳಲು ಪ್ರೋತ್ಸಾಹ ಕೊಡಿ.

**ನೆನಪಿಡಿ**

**ಶಕ್ತಿಯುತ ಲಸಿಕೆಯನ್ನು ಪೂರ್ಣ ಪ್ರಮಾಣದಲ್ಲಿ ಮತ್ತು ಸರಿಯಾದ ವಯಸ್ಸಿನಲ್ಲಿ ಕೊಟ್ಟರೆ ಮಾತ್ರ ಲಸಿಕೆಗಳು ಪರಿಣಾಮಕಾರಿ. ಲಸಿಕೆ ನೀಡುವ ವೇಳಾ ಪಟ್ಟಿಯನ್ನನುಸರಿಸಿ.**

## 1.4 ಲಸಿಕೆಗಳು ಹಾನಿಯಾಗುವುದು ಹೇಗೆ

ಲಸಿಕೆಗಳನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ ನೀವು ಅವುಗಳನ್ನು ಸುಲಭವಾಗಿ ಹಾಳು ಮಾಡಬಹುದು. ಚೆನ್ನಾದ ಪರಿಸ್ಥಿತಿಯಲ್ಲಿದ್ದು, ಮಗುವಿಗೆ ರಕ್ಷಣೆ ನೀಡುವಂತಿದ್ದರೆ ಮಾತ್ರ ಲಸಿಕೆ ಸಮರ್ಥವಾಗಿದೆ ಎಂದರ್ಥ, ಅದು ಹಾಳಾಗಿ ಮಗುವಿಗೆ ಪ್ರತಿರೋಧಕ ಶಕ್ತಿ ಕೊಡದಿದ್ದರೆ ಅಸಮರ್ಥವಾಗಿದೆ ಎಂದರ್ಥ.

ಒಳ್ಳೆಯ ರಕ್ಷಣೆಯಿದ್ದರೂ ಕೆಲವು ಸಮಯದ ನಂತರ ಎಲ್ಲ ಲಸಿಕೆಗಳು ತಮ್ಮ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತವೆ. ಲಸಿಕೆಯ ಸೀಸೆಯ ಮೇಲೆ ಮುದ್ರಿಸಿದ ಕೊನೆಯ ದಿನಾಂಕದಿಂದ ಅದನ್ನು ತಿಳಿಯಬಹುದು.

**ಉಷ್ಣತೆ, ಸೂರ್ಯನಬೆಳಕು ಮತ್ತು ಮಂಜುಗಟ್ಟಿಸುವ ಕ್ರಮಗಳೆಲ್ಲಾ ಲಸಿಕೆಗಳನ್ನು ಹಾಳುಮಾಡಬಹುದು**

* ಉಷ್ಣಾಂಶ ಮತು ಸೂರ್ಯನಬೆಳಕು ಲಸಿಕೆಗಳನ್ನು ಹಾಳುಮಾಡುತ್ತವೆ.

* ಹಿಮಗಟ್ಟಿಸುವಿಕೆಯು ನಿರ್ಜೀವ ಲಸಿಕೆ ಮತ್ತು ಟ್ಯಾಕ್ಸಾಯಿಡ್‌ಗಳನ್ನು ಹಾಳುಮಾಡುತ್ತದೆ.

ಎಲ್ಲಾ ಲಸಿಕೆಗಳನ್ನು ಸೂರ್ಯನ ಬೆಳಕಿನಿಂದ ದೂರ ಮತ್ತು ಸರಿಯಾದ ಶೀತಾಂಶದಲ್ಲಿ ಇಡುವುದೇ ಕ್ಷೇಮದ ಮಾರ್ಗ. ಲಸಿಕೆಗಳು ಉಷ್ಣಾಂಶ ಅಥವಾ ಹಿಮಗಟ್ಟಿಸುವಿಕೆಯಿಂದ ಒಮ್ಮೆ ನಿರ್ಬಲವಾದವೆಂದರೆ ಮತ್ತೆ ಅವನ್ನು ಸಮರ್ಥಗೊಳಿಸುವುದಕ್ಕೆ ಆಗುವುದಿಲ್ಲ. ಹಾನಿಗೊಂಡ ಲಸಿಕೆಗಳನ್ನು ಮತ್ತೆ ಸರಿಯಾದ ಶೀತಾಂಶದಲ್ಲಿಟ್ಟರೂ ಪ್ರಯೋಜನವಾಗುವುದಿಲ್ಲ.

# 2. ಶೀತಲ ಸರಪಣಿ

## 2.1 ಲಸಿಕೆಗಳನ್ನು ಕಾಪಾಡುವಿಕೆ — ಶೀತಲ ಸರಪಣಿ

ಉತ್ಪಾದನೆಯ ಹಂತದಿಂದ ಹಿಡಿದು ಮಕ್ಕಳ ಮೈ ಸೇರುವವರೆಗೂ ಲಸಿಕೆಗಳು ಸರಿಯಾದ ಶೀತಾಂಶದಲ್ಲಿರಬೇಕು. ಲಸಿಕೆ ಗಳನ್ನು ಉತ್ಪಾದಕರಿಂದ ಹಿಡಿದು ಮಗುವಿನವರೆಗೆ ತಣ್ಣಗಿಡುವ ಸಲಕರಣೆಗಳು ಮತ್ತು ಸಿಬ್ಬಂದಿಗೆ ಒಟ್ಟಾರೆ **ಶೀತಲ ಸರಪಣಿ** ಎಂದು ಕರೆಯಲಾಗುತ್ತದೆ.

ಲಸಿಕೆಗಳು ಆರೋಗ್ಯ ಕೇಂದ್ರ ಸೇರುವ ಮುಂಚೆ ;

* ಅವುಗಳನ್ನು ವಿಮಾನ ನಿಲ್ದಾಣದಿಂದ ತಕ್ಷಣ ಪಡೆಯಬೇಕು.
* ಅ ವು ಗ ಳ ನ್ನು ಕೇಂದ್ರ ದಾಸ್ತಾನು, ವಿಭಾಗಿಯ ದಾಸ್ತಾನು ಮತ್ತು ಜಿಲ್ಲಾ ದಾಸ್ತಾನುಗಳಲ್ಲಿ ಶೀತಕಗಳಲ್ಲಿ ಸರಿಯಾದ ಶೀತಾಂಶದಲ್ಲಿ ದಾಸ್ತಾನು ಮಾಡಬೇಕು.
* ಒಂದು ದಾಸ್ತಾನಿನಿಂದ ಇನ್ನೊಂದು ದಾಸ್ತಾನಿಗೆ ಸಾಗಿಸುವಾಗಲೂ ಅವನ್ನು ತಣ್ಣಗಿಟ್ಟಿರಬೇಕು.

ಆಗಮಾತ್ರ ಲಸಿಕೆಗಳು ನಿಮ್ಮ ಆರೋಗ್ಯ ಕೇಂದ್ರಕ್ಕೆ ಸರಿಯಾದ ಪರಿಸ್ಥಿತಿಯಲ್ಲಿ ತಲುಪುತ್ತವೆ.

**ಲಸಿಕೆಗಳು ಆರೋಗ್ಯ ಕೇಂದ್ರಕ್ಕೆ ಸೇರಿದ ನಂತರ**

* ಲಸಿಕೆಗಳನ್ನು ನಿಮ್ಮ ಆರೋಗ್ಯ ಕೇಂದ್ರದ ಶೀತಕಗಳಲ್ಲಿ ಸರಿಯಾದ ಶೀತಾಂಶದಲ್ಲಿಡಬೇಕು.
* ಲಸಿಕೆಗಳನ್ನು ಕೊಡುವ ಸ್ಥಳಕ್ಕೆ ಒಯ್ಯುವಾಗ ಮಂಜಿನ ಒತ್ತೆಗಳಿರುವ ಅಥವಾ ಮಂಜಿನ ಗಡ್ಡೆಗಳಿರುವ ಲ ಸಿ ಕಾ ವಾ ಹ ಕ ದಲ್ಲಿಯೇ ತೆಗೆದುಕೊಂಡು ಹೋಗಬೇಕು.
* ಲಸಿಕೆಗಳನ್ನು ಮಕ್ಕಳಿಗೆ ಕೊಡುವಾಗ ಲಸಿಕಾ ಸೀಸೆಗಳನ್ನು ಮಂಜಿನ ಒತ್ತೆಯ ಮೇಲೆ ಅಥವಾ ಮಂಜುಗಡ್ಡೆಗಳಿರುವ ಬಟ್ಟಲಿನಲ್ಲಿ ಇಡಬೇಕು.

**ಆರೋಗ್ಯ ಕೇಂದ್ರದ ಶೀತಕಗಳಲ್ಲಿ ಲಸಿಕೆಗಳನ್ನು ಕಾಪಾಡುವುದು**

ಆರೋಗ್ಯ ಕೇಂದ್ರದ ಶೀತಕಗಳಲ್ಲಿ, ಲಸಿಕೆಗಳನ್ನು ಒಂದು ತಿಂಗಳ ಕಾಲ ಒಳ್ಳೆಯ ಸ್ಥಿತಿಯಲ್ಲಿ ಇಡಬಹುದು, ಆದರೆ ಅವುಗಳನ್ನು ಎಚ್ಚರದಿಂದ ನೋಡಿಕೊಳ್ಳಬೇಕು.




ಚಿತ್ರ 2.1 ಲಸಿಕೆಗಳನ್ನು ಸರಿಯಾಗಿಟ್ಟಿರುವದನ್ನು ತೋರಿಸುವ ಆರೋಗ್ಯ ಕೇಂದ್ರದ ಒಂದು ಶೀತಕ

**ಲಸಿಕೆಗಳನ್ನು ಶೀತಕದಲ್ಲಿ ಸರಿಯಾಗಿ ಜೋಡಿಸಿಡಿ**

ಚಿತ್ರ 2.1 ಚಿತ್ರವನ್ನು ನೋಡುತ್ತಾ. ಅದು ಈ ಎಲ್ಲ ನಿಯಮಗಳನ್ನು ಹೇಗೆ ತೋರಿಸುತ್ತದೆ ಎನ್ನುವುದನ್ನು ಗಮನಿಸಿ :

* ಡಬ್ಬಿಗಳ ಮಧ್ಯೆ ಗಾಳಿ ಹರಿದಾಡುವಂತೆ ಲಸಿಕೆಗಳನ್ನು ಅಚ್ಚುಕಟ್ಟಾಗಿ ಜೋಡಿಸಿ.

* ಪೋಲಿಯೋ ಮತ್ತು ದಡಾರದ ಲಸಿಕೆಗಳನ್ನು ಹಿಮಘಟಕದ ಹತ್ತಿರದ ಮೇಲ್ಭಾಗದ ಖಾನೆಯಲ್ಲಿಡಿ.

* ಡಿ. ಪಿ. ಟಿ. ಟಿಟಿ ಮತ್ತು ಟೈಫಾಯಿಡ್ ಲಸಿಕೆಗಳನ್ನು ಹಿಮಘಟಕದಿಂದ ದೂರವಿರುವಂತೆ ಮಧ್ಯದ ಖಾನೆಯಲ್ಲಿಡಿ.

* ದಡಾರ ಮತ್ತು ಬಿಸಿಜಿ ಯನ್ನು ಕರಗಿಸುವ ದ್ರವವನ್ನು ಲಸಿಕೆಗಳೊಡನೆ ಶೀತಕದಲ್ಲಿಡಿ. (ಆದರೆ ಹಿಮಘಟಕದಲ್ಲಿಡಬೇಡಿ)

* ಲಸಿಕೆ ನೀಡುವುದಕ್ಕಾಗಿ ಲಸಿಕಾ ವಾಹಕದಲ್ಲಿ ತೆಗೆದುಕೊಂಡು ಹೋಗಿ ಹಿಂತಿರುಗಿಸಿದ ಲಸಿಕೆಗಳನ್ನು ಇಡಲು ವಿಶೇಷವಾದ ಒಂದು ಡಬ್ಬಿ ಇರಲಿ.

* ವಿದ್ಯುತ್ ಕಡಿತವಾದಾಗ, ಶೀತಕವನ್ನು ಕಡಿಮೆ ಉಷ್ಣಾಂಶದಲ್ಲಿಡಲು ನೆರವಾಗುವಂತೆ ಪ್ಲಾಸ್ಟಿಕ್ ಸೀಸೆಗಳಲ್ಲಿ ನೀರು ತುಂಬಿ ಅಥವಾ ಬಿಡಿ ಹಿಮ ಒತ್ತೆಗಳನ್ನು ಶೀತಕದ ಕೆಳ ಖಾನೆಯಲ್ಲಿಡಿ.

* ಶೀತಕದ ಬಾಗಿಲನ್ನು ಮುಚ್ಚಿಡಿ. (2.1 ಚಿತ್ರದಲ್ಲಿ ತೋರಿಸಿಲ್ಲ) ಅದನ್ನು ತೆಗೆಯಬೇಕಾದಾಗ ನೀವು ಮೊದಲು ಮಾಡಬೇಕಾ

ದುದನ್ನು ಯೋಚಿಸಿ, ನಂತರ ಬಾಗಿಲು ತೆಗೆದು ಮಾಡಬೇಕಾದದ್ದನ್ನು ಮಾಡಿ ಬಾಗಿಲನ್ನು ತಕ್ಷಣವೆ ಮುಚ್ಚಿ.

ಬಾಗಿಲನ್ನು ಮೇಲಿಂದ ಮೇಲೆ ತೆಗೆಯಬೇಡಿ.

ಲಸಿಕೆಯ ಶೀತಕಗಳಲ್ಲಿ ಆಹಾರ ಅಥವಾ ಪಾನೀಯಗಳನ್ನಿಡಬೇಡಿ.

ಶೀತಕದ ಬಾಗಿಲಲ್ಲಿ ಲಸಿಕೆಗಳನ್ನಿಡಬೇಡಿ. ಹಿಮಘಟಕವನ್ನು ಮಂಜಿನ ಒತ್ತೆ ಮತ್ತು ಮಂಜುಗಡ್ಡೆಗಳನ್ನು ತಯಾರಿಸಲುಪಯೋಗಿಸಿ.

ಒಂದು ತಿಂಗಳಿಗೆ ಬೇಕಾಗುವಷ್ಟಕ್ಕಿಂತ ಹೆಚ್ಚಿನ ಲಸಿಕೆಗಳನ್ನಿಡಬೇಡಿ.

ಅವಧಿ ಮುಗಿದ ಲಸಿಕೆಗಳನ್ನು ಶೀತಕದಲ್ಲಿಡಬೇಡಿ.

**ಶೀತಕದ ಉಷ್ಣಾಂಶವನ್ನು ಪರೀಕ್ಷಿಸಿ**

ಶೀತಕದ ಮುಖ್ಯ ಬಾಗದಲ್ಲಿಯ ಉಷ್ಣಾಂಶವನ್ನು ದಿನಕ್ಕೆರಡು ಸಲ (ದಿನದ ಕೆಲಸ ಪ್ರಾರಂಭಿಸುವಾಗ ಮತ್ತು ಮುಗಿಸುವ ಮುಂಚೆ) ಪರೀಕ್ಷಿಸಿ.

ಇದು + 4° ಸಿ ಮತ್ತು + 8° ಸಿ ಇರಬೇಕು.

ಇದಕ್ಕಾಗಿ —

* ಶೀತಕದಲ್ಲಿ ಒಂದು ವರ್ತುಲಾ ಉಷ್ಣಮಾಪಕ ಇರಬೇಕು.
* ಉಷ್ಣಾಂಶವನ್ನು ದಾಖಲು ಮಾಡಲು ಶೀತಕದ ಮೇಲೆ ಒಂದು ನಮೂನೆಯನ್ನು ಇಟ್ಟಿರಬೇಕು.

ಉಷ್ಣಾಂಶ ದಾಖಲೆಗಾಗಿ ಬಳಸುವ ನಮೂನೆಯನ್ನು ಈ ಕೆಳಗೆ ನೋಡಬಹುದು. ಇದು ಯಾವಾಗಲೂ ಶೀತಕದ ಮೇಲಿರಬೇಕು.

**ಶೀತಕದ ಉಷ್ಣಾಂಶ ದಾಖಲೆಯ ನಮೂನೆ**

**(ಮೇಲ್ವಿಚಾರಕರ ಪರೀಕ್ಷೆಗಾಗಿ ಶೀತಕದ ಮೇಲಿಡಿ)**

ರಾಜ್ಯ :  ಜಿಲ್ಲೆ :

ಪಟ್ಟಣ/ಪ್ರಾಥಮಿಕ ಆರೋಗ್ಯ ಕೇಂದ್ರ :  ವಿಭಾಗ/ಕ್ಷೇತ್ರ

ಕೇಂದ್ರದ ಹೆಸರು :  ತಿಂಗಳು :

| ದಯವಿಟ್ಟು ಉತ್ತರಿಸಿ ; ಉಂಟು/ಇಲ್ಲ. (ತಿಂಗಳ ಕೊನೆಯ ದಿವಸ) | ದಿನಾಂಕ | ಶೀತಕದಲ್ಲಿಯ ಉಷ್ಣಾಂಶ (ಸಿ°) ಬೆಳಿಗ್ಗೆ 10 ಗಂಟೆ | ಸಂಜೆ 4 ಗಂಟೆ | ವಿದ್ಯುತ್ ಕಡಿತ (ಘಂಟೆಗಳಲ್ಲಿ) |
|---|---|---|---|---|
| **ಶೀತಕವು** | 1 | | | |
| 1. ಮಟ್ಟಸವಾಗಿದೆಯೇ ? | 2 | | | |
| 2. ಸೂರ್ಯನ ಬೆಳಕಿನಿಂದ ದೂರವಿದೆಯೇ ? | 3 | | | |
| 3. ಬೀಗ ಹಾಕಿದೆಯೇ ? | 4 | | | |
| 4. ನಿಯತಕಾಲಿಕವಾಗಿ ಮಂಜು ತೆಗೆದಿದೆಯೇ ? | 5 | | | |

5. ಪ್ಲಗ್‌ನ್ನು ಸಾಕೆಟ್ಟಿಗೆ ಭದ್ರವಾಗಿ ಹಾಕಿದೆಯೇ ?
6. ಆಹಾರ ಅಥವಾ ಪಾನೀಯಗಳಿಗೆ ಬಳಸಿದೆಯೇ ?

ಬ. ಲಸಿಕೆಗಳನ್ನು

1. ಒಪ್ಪವಾಗಿಟ್ಟಿದೆಯೇ ?
2. ತಿರುಗಿಸಲಾಗುತ್ತಿದೆಯೆ ?
3. ಬಾಗಿಲಿನಲ್ಲಿಟ್ಟಿದೆಯೇ ?
4. ಹಿಮಗಟ್ಟಿಸಿದೆಯೇ ? (ಪೋಲಿಯೋ ಹೊರತಾಗಿ)
5. ಅವಧಿ ಮುಗಿದಿದೆಯೇ ?

ಕ. ತಿಂಗಳಲ್ಲಿ ತಯಾರಿಸಿದ ಶೀತಕ ಒತ್ತೆಗಳ ಸಂಖ್ಯೆ

ಡ, ಉಷ್ಣಾಂಶ 8°ಸಿ ಗಿಂತ ಹೆಚ್ಚು
ಅವಧಿ 1-2 3-4 5 +
(ಘಂಟೆಗಳು)

ಎಪ್ಪಾವರ್ಶಿ.

| ದಿನಾಂಕ | ಶೀತಕದಲ್ಲಿ ಉಷ್ಣಾಂಶ (ಸಿ°) | | ವಿದ್ಯುತ್ ಕಡಿತ (ಘಂಟೆಗಳಲ್ಲಿ) |
|---|---|---|---|
| | ಬೆಳಗ್ಗೆ 10 ಗಂಟೆ | ಸಂಜೆ 4 ಗಂಟೆ | |
| 6 | | | |
| 8 | | | |
| 7 | | | |
| 9 | | | |
| 10 | | | |
| 11 | | | |
| 12 | | | |
| 13 | | | |
| 14 | | | |
| 15 | | | |
| 16 | | | |
| 17 | | | |
| 18 | | | |
| 19 | | | |
| 20 | | | |
| 21 | | | |
| 22 | | | |
| 23 | | | |
| 24 | | | |
| 25 | | | |
| 26 | | | |
| 27 | | | |
| 28 | | | |
| 29 | | | |
| 30 | | | |

**ನಿಮ್ಮ ಆರೋಗ್ಯ ಕೇಂದ್ರದ ಶೀತಕ್ಕಾಗಿ ನೆನಪಿಡಿ**

ಲಸಿಕೆಗಳನ್ನು ಸರಿಯಾಗಿ ಜೋಡಿಸಿಡಿ
ಉಷ್ಣಾಂಶವನ್ನು ದಿನಕ್ಕೆರಡು ಸಲ ಪರೀಕ್ಷಿಸಿ
1/2 ಸೆಂ. ಮಿ. ಗಿಂತ ಹೆಚ್ಚು ದಪ್ಪವಾಗಿರುವ ಮಂಜನ್ನು ತೆಗೆಯಿರಿ
ಇಲ್ಲಿ ಲಸಿಕೆಗಳನ್ನು ಒಂದು ತಿಂಗಳಿಗಿಂತ ಹೆಚ್ಚಿಗಿಡಬೇಡಿ

## 2.2 ಲಸಿಕೆಗಳನ್ನು ಸಾಗಿಸಲು ಶೀತಕ ಸರಪಣಿ ಸಲಕರಣೆ

ನೀವು ಲಸಿಕೆಗಳನ್ನು ಶೀತಕದಿಂದ ಕೊಂಡೊಯ್ದು ತಾಯಿ ಅಥವಾ ಮಗುವಿಗೆ ಕೊಡುವವರೆಗೂ ತಣ್ಣಗಿಡಬೇಕು. ಸಣ್ಣ ಪ್ರಮಾಣದಲ್ಲಿ ಲಸಿಕೆಗಳನ್ನು ಉಪಕೇಂದ್ರಗಳಿಗೆ ಅಥವಾ ಗ್ರಾಮಗಳಿಗೆ ಸಾಗಿಸಲು ಲಸಿಕಾ ವಾಹಕಗಳನ್ನು ಬಳಸಲಾಗುತ್ತದೆ.

**ಲಸಿಕಾವಾಹಕಗಳು**

ಲಸಿಕಾವಾಹಕಗಳಿಗೆ ದಪ್ಪ ಗೋಡೆ ಮತ್ತು ಮುಚ್ಚಳಗಳಿರುತ್ತವೆ. ಅವುಗಳನ್ನು ಉಷ್ಣ ಹಾದು ಹೋಗದಂತಹ ವಿಶೇಷ ವಸ್ತುವಿನಿಂದ ಮಾಡಿರುತ್ತಾರೆ. ಒಳಪೆಟ್ಟಿಗಳು ಲಸಿಕೆಗಳನ್ನು ತಣ್ಣಗೆ ಮಾಡಲಾರವು ಕೇವಲ ಶೀತಕ ಅಥವಾ ಮಂಜುಗಡ್ಡೆ ಮಾತ್ರ ವಸ್ತುಗಳನ್ನು ತಣ್ಣಗೆ ಮಾಡಬಲ್ಲವು. ಆದರೆ ಒಳಪೆಟ್ಟಿಗೆಯಿರುವ ಸಲಕರಣೆ ಮಂಜು ಮತ್ತು ಲಸಿಕೆಗಳನ್ನು ಸ್ವಲ್ಪ ಕಾಲ ಮಾತ್ರ ತಣ್ಣಗಿಡಲು ಸಾಧ್ಯ. ಏಕೆಂದರೆ ಅದರೊಳಗೆ ಶಾಖ ಹೋಗಿ ಬೆಚ್ಚಗೆ ಮಾಡಲು ಸಾಧ್ಯವಿಲ್ಲ.

**ನೆನಪಿಡಿ**

ಲಸಿಕಾವಾಹಕಗಳನ್ನು ಸೂರ್ಯನ ಬೆಳಕಿನಲ್ಲಿ ಬಿಡಬೇಡಿ
ಮುಚ್ಚಳವನ್ನು ತೆರೆದಿಡಬೇಡಿ
ಅವುಗಳ ಮೇಲೆ ಕೂರಬೇಡಿ, ಅವುಗಳನ್ನು ಬೀಳಿಸಬೇಡಿ
ಅವನ್ನು ಸ್ವಚ್ಛವಾಗಿ ಮತ್ತು ಒಣಗಿಡಿ
ಹಿಮಗಟ್ಟಿದ ಮಂಜಿನ ಒತ್ತೆಗಳನ್ನುಪಯೋಗಿಸಿ

## 2.3 ಮಂಜಿನ ಒತ್ತೆಗಳು

ತಂಪು ಒತ್ತೆಗಳನ್ನು (ಮಂಜಿನ ಒತ್ತೆಗಳು) ಲಸಿಕಾವಾಹಕಗಳ ಗೋಡೆಗಳ ಒಳಭಾಗದಲ್ಲಿ ಅವುಗಳನ್ನು ತಣ್ಣಗಿಡಲುಪಯೋಗಿಸಲಾಗುತ್ತದೆ. ಅವು ನೀರು ತುಂಬಿದ ಪ್ಲಾಸ್ಟಿಕಿನ ಚಪ್ಪಟೆಯಾದ ಸೀಸೆಗಳಾಗಿರುತ್ತವೆ. ಶೀತಕಗಳ ಹಿಮಘಟಕದಲ್ಲಿ ಅಥವಾ ಮಂಜುಗಟ್ಟಿಸುವ ಯಂತ್ರದಲ್ಲಿ ಇಟ್ಟು, ಮಂಜಿನ ಒತ್ತೆಗಳನ್ನು ತಯಾರಿಸಲಾಗುತ್ತದೆ. ಮಂಜಿನ ಒತ್ತೆಗಳನ್ನು ಒಂದರಮೇಲೊಂದರಂತೆ ಚಪ್ಪಟೆಯಾಗಿಡದೆ, ಅಂಚಿನ ಮೇಲೆ ನಿಲ್ಲುವಂತೆ ಇಡಬೇಕು. ಇದರಿಂದ ಮಂಜು ಒತ್ತೆಯನ್ನು ಕಡಿಮೆ ಅವಧಿಯಲ್ಲಿ ಹಿಮಗಟ್ಟಿಸಬಹುದು. ನೀರಿಗೆ ಉಪ್ಪನ್ನು ಸೇರಿಸಬಾರದು.



ಚಿತ್ರ 2.3

**ಮಂಜಿನ ಒತ್ತೆಗಳನು ತಯಾರಿಸಲು**

ಒತ್ತೆಗಳಲ್ಲಿ ಮುಕ್ಕಾಲುಭಾಗ ನೀರು ತುಂಬಿ ಮುಚ್ಚಳವನ್ನು ಭದ್ರಮಾಡಿ.

ಅವುಗಳನ್ನು ತಲೆಕೆಳಗೆಮಾಡಿ ಹಿಡಿದು ಹಿಚುಕಿ ನೋಡಿ ನೀರು ಸೋರುವುದಿಲ್ಲವೆಂಬುದನ್ನು ಖಚಿತ ಪಡಿಸಿಕೊಳ್ಳಿ.

ಮಂಜಿನ ಒತ್ತೆಯನ್ನು ಆದರ ಮಗ್ಗಲುಮಾಡಿ ಹಿಮಘಟಕದಲ್ಲಿರಿಸಿ.

ಗಟ್ಟಿಯಾಗಿ ಹಿಮಗಟ್ಟಲು ಮಂಜಿನ ಒತ್ತೆಗಳನ್ನು ರಾತ್ರಿ ಇಡೀ ಬಿಡಿ.

## 2.4 ಲಸಿಕಾವಾಹಕಗಳನ್ನು ತುಂಬಲು ತಯಾರಾಗುವುದು

### ಶೀತಕದ ಬಾಗಿಲು ತೆಗೆಯುವುದಕ್ಕೆ ಮುಂಚೆ

* ಪ್ರತಿಯೊಂದು ಲಸಿಕೆಯ ಎಷ್ಟು ಸೀಸೆಗಳನ್ನು ತುಂಬಬೇಕೆಂಬುದನ್ನು ನಿರ್ಧರಿಸಿ.

- ಲಸಿಕೆ ಪಡೆಯಲು ಬರುವ ಮಕ್ಕಳ ಸಂಖ್ಯೆ ನಿಮಗೆ ತಿಳಿದಿರಬೇಕು.
- ಲಸಿಕೆಯ ಪ್ರತಿ ಸೀಸೆಯಲ್ಲಿ ಎಷ್ಟು ಡೋಸ್‌ಗಳಿರುತ್ತವೆ ಎನ್ನುವುದು ನಿಮಗೆ ತಿಳಿದಿರಬೇಕು.
- ನಿಮಗೆ ಯಾವಾಗಲೂ ಒಂದು ಹೆಚ್ಚಿನ ಲಸಿಕೆಯ ಸೀಸೆ ಬೇಕಾಗುತ್ತದೆ.
- ದಡಾರ ಮತ್ತು ಬಿಸಿಜಿ ಯ ಪ್ರತಿ ಸೀಸೆಗೂ ಒಂದು ಆಂಪ್ಯೂಲ್ ದ್ರಾವಕ ತೆಗೆದುಕೊಳ್ಳಿ.

ಲಸಿಕಾವಾಹಕ ತಯಾರಾಗುವವರೆಗೆ ಲಸಿಕೆ ಮತ್ತು ದ್ರಾವಕದ ಸೀಶೆಗಳನ್ನು ಶೀತಕದಲ್ಲಿ ಬಿಡಿ.
ಲಸಿಕಾವಾಹಕವನ್ನು ಪರೀಕ್ಷಿಸಿ :

ಒಳಪಟ್ಟಿಯನ್ನು ಪರೀಕ್ಷಿಸಿ (ಬಿರುಕುಗಳಿಗಾಗಿ)

ಮುಚ್ಚಳ ಬದ್ರವಾಗಿ ಕೊಡುವುದನ್ನು ಮತ್ತು ಹಿಡಿಗಳು ಕೆಲಸಮಾಡುವುದನ್ನು ಪರೀಕ್ಷಿಸಿ.

## 2.5 ಥರ್ಮಾಸಪ್ಲಾಸ್ಕ್ ಅಥವಾ ಥರ್ಮೋಕೂಲ್ ಬಾಕ್ಸ್‌ಗಳಲ್ಲಿ ಮಂಜಿನ ಗಡ್ಡೆಗಳನ್ನು ಜೋಡಿಸಿ

ಮಂಜಿನ ಗಡ್ಡೆಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ಉಪಯೋಗಿಸಬೇಕು.

ಲಸಿಕೆವಾಹಕದ ಕೆಳಬಾಗದಲ್ಲಿ ಮಂಜುಗಡ್ಡೆಯ ಚೀಲ ಒಂದನ್ನಿಡಿ.

ಲಸಿಕೆಯ ಸೀಸೆಗಳನ್ನು ಈ ಚೀಲದ ಮೇಲಿಡಿ.

ಲಸಿಕೆ ಮೇಲೆ ಮತ್ತೊಂದು ಮಂಜಿನಗಡ್ಡೆಯ ಚೀಲವನ್ನಿಡಿ.

ಮುಚ್ಚಳವನ್ನು ಭದ್ರವಾಗಿ ಮುಚ್ಚಿ

## 2.6 ಲಸಿಕೆಗಳನ್ನು ತುಂಬುವುದು

### ಲಸಿಕೆಗಳನ್ನು ಶೀತಕದಿಂದ ಹೊರತೆಗೆಯುವುದು

ಹಿಂದಿನ ಸಲ ತೆಗೆದುಕೊಂಡು ಹೋಗಿ ಉ ಪ ಯೋ ೀ ಗಿ ಸಿ ದೆ, ಹಿಂದಕ್ಕೆ ತಂದಿಟ್ಟದ್ದ ಲಸಿಕೆಯ ಸೀಶೆಗಳನ್ನು ಮೊ ದ ಲ ತೆಗೆದುಕೊಳ್ಳಿ.

(ಶೀತಕದಲ್ಲಿ "ಹಿಂತಿರುಗಿಸದ" ಎಂದು ಬರೆದ ವಿಶೇಷ ಡಬ್ಬಿಯನ್ನಿಡಿ)

* ನಂತರ ಶೀತಕದಲ್ಲಿ ಬಹಳ ಸಮಯದಿಂದಿರುವ ಅತಿ ಹಳೆಯ ಲಸಿಕೆಗಳನ್ನು ತೆಗೆದುಕೊಳ್ಳಿ ಸೀಸೆಯ ಮೇಲಿರುವ ಪಟ್ಟಿನೋಡಿ ಅವಧಿ ಕೊನೆಗೊಳ್ಳುವುದನ್ನು ಗುರುತಿಸಿ.
* ಪ್ರತಿಯೊಂದು ಲಸಿಕೆಯ ದಿನವನ್ನು ಪರೀಕ್ಷಿಸಿ. ಲಸಿಕೆಯ ಕೊನೆಯ ದಿನ ಮುಗಿದಿದ್ದರೆ ಅದನ್ನು ಉಪಯೋಗಿಸಬೇಡಿ. ಅದನ್ನು ಶೀತಕದ ಹೊರಗೆ ತೆಗೆಯಿರಿ. ಅದು ಹಾಳಾಗಿದೆ ಎಂದು ದಾಖಲು ಮಾಡಿ.

ಶೀತಕದ ಬಾಗಿಲನ್ನು ಮುಚ್ಚಿ.

**ಲಸಿಕೆಗಳನ್ನು ವಾಹಕಗಳಲ್ಲಿಡುವುದು**

ಮಂಜಿನ ಒತ್ತೆಗಳು ಪೂರ್ತಿ ಹಿಮುಗಟ್ಟಿರುವುದನ್ನು ಪರೀಕ್ಷಿಸಿ.

ಮಂಜಿನ ಒತ್ತೆಗಳನ್ನು ಲಸಿಕಾವಾಹಕದಲ್ಲಿಡಿ.

ಡಿ.ಪಿ.ಟಿ. ಡಿ.ಟಿ. ಟಿ.ಟಿ. ಮತ್ತು ಟೈಫಾಯಿಡ್ ಲಸಿಕೆಗಳು ಮತ್ತು ಮಂಜಿನ ಒತ್ತೆಗಳ ಮಧ್ಯ ವಾರ್ತಾಪತ್ರಿಕೆ ಅಥವಾ ರಟ್ಟು ಅಥವಾ ಪ್ಲಾಸ್ಟಿಕ್ ಒತ್ತೆಗಳನ್ನಿಡಿ.

ಡಿ.ಪಿ.ಟಿ. ಡಿ.ಟಿ ಟಿ.ಟಿ ಮತ್ತು ಟೈಫಾಯಿಡ್ ಲಸಿಕೆಗಳು ಮಂಜಿಗೆ ಸಂಪರ್ಕವಾಗದಂತೆ ನೋಡಿಕೊಳ್ಳಿ ಇಲ್ಲದಿದ್ದರೆ ಅವು ಹಿಮುಗಟ್ಟಿ ಹಾಳಾಗಬಹುದು.

ಮುಚ್ಚಳವನ್ನು ಭದ್ರವಾಗಿ ಮುಚ್ಚಿ.

ಲಸಿಕೆಗಳು ಮತ್ತು ದ್ರಾವಕಗಳನ್ನು ನೀವು ಉಪಯೋಗಿಸಲು ಸಿದ್ಧವಾಗುವವರೆಗೆ ಲಸಿಕಾ ವಾಹಕಗಳಲ್ಲಿಡಿ.

| |
|---|
| ಹಿಂತಿರುಗಿಸಿದ ಲಸಿಕೆಗಳನ್ನು ಉಳಿದವಕ್ಕಿಂತ ಮುಂಚೆ ಉಪಯೋಗಿಸಿ |
| ಅತ್ಯಂತ ಹಳೆಯ ಲಸಿಕೆಗಳನ್ನು ಮೊದಲು ಉಪಯೋಗಿಸಿ |
| ಅವಧಿ ಮೀರಿದ್ದರೆ ಉಪಯೋಗಿಸಲೇ ಬೇಡಿ |

# 3. ಸಿರೆಂಜುಗಳು ಸೂಜಿಗಳು ಮತ್ತು ಸಂಸ್ಕರಣ

## 3.1 ಸಿರೆಂಜುಗಳು ಮತ್ತು ಸೂಜಿಗಳು

ಸಿರೆಂಜು ಮತ್ತು ಸೂಜಿಯ ಭಾಗಗಳು

ಬೇರೆ ಬೇರೆ ವಿಧದ ಚುಚ್ಚು ಮದ್ದು ಹಾಕಲು ಸಿರೆಂಜು ಮತ್ತು ಸೂಜಿಗಳು ವಿವಿಧ ಗಾತ್ರ ಮತ್ತು ಆಕಾರಗಳಲ್ಲಿ ಬರುತ್ತವೆ ಆದರೆ ಅವೆಲ್ಲವೂ ಒಂದೇ ತರಹದ ಮುಖ್ಯ ಭಾಗಗಳನ್ನು ಹೊಂದಿರುತ್ತವೆ.




ಚಿತ್ರ 3.1 ಸಿರೆಂಜು ಮತ್ತು ಸೂಜಿಯ ಭಾಗಗಳು

**ಲಸಿಕೆ ನೀಡಲು ಬೇಕಾಗುವುದೇನು ?**

ನಿಮಗೆ ಮೂರು ಗಾತ್ರದ ಸಿರೆಂಜುಗಳು ಬೇಕು

* 10 ಮಿ. ಲೀ ಅಥವಾ 5 ಮಿ. ಲೀ.
* 2 ಮಿ. ಲೀ ಅಥವಾ 1 ಮಿ. ಲೀ.
* ಟ್ಯುಬರಾಕ್ಯುಲಿನ್

ನಿಮಗೆ 3 ಗಾತ್ರದ ಸೂಜಿಗಳು ಬೇಕು.

* ಮಿಶ್ರ ಮಾಡಲು ಉದ್ದದ 18 ಗಾಜ್
* ಸ್ನಾಯುಗಳಲ್ಲಿ ಮತ್ತು ಚರ್ಮದ ಕೆಳಗೆ ಚುಚ್ಚಲು 30 ಮಿ. ಮೀ ಉದ್ದ ಮತ್ತು 22 ಗಾಜ್
* ಚರ್ಮದ ಒಳಗೆ ಚುಚ್ಚಲು 10 ಮಿ. ಮೀ. ಉದ್ದ 26 ಗಾಜ್ ದಪ್ಪದು.

(ವಿವಿಧ ಗಾತ್ರದ ಸಿರೆಂಜು ಮತ್ತು ಸೂಜಿಗಳನ್ನು ತೋರಿಸುವುದು)

## 3.2 ಸಂಸ್ಕರಣ ಮತ್ತು ಕಲುಷಿತಗೊಳ್ಳುವಿಕೆ

ಸಂಸ್ಕರಿಸಿದ ಅಂದರೆ ಸೂಕ್ಷ್ಮ ರೋಗಾಣುಗಳಿಂದ ಮುಕ್ತವಾದ ಎಂದರ್ಥ.

ನೀವು ಬಳಸುವ ಸಿರೆಂಜುಗಳು, ಸೂಜಿಗಳು ಮತ್ತು ಅವುಗಳನ್ನಿಡಲು ಉಪಯೋಗಿಸುವ ತಟ್ಟೆಗಳೆಲ್ಲ ಸಂಸ್ಕರಣಗೊಳ್ಳಬೇಕು.

ಅವುಗಳನ್ನುಪಯೋಗಿಸುವಾಗ ಸಂಸ್ಕರಣ ಮಾಡಿಯೇ ಇಡಬೇಕು. ನಿಮ್ಮ ಲಸಿಕೆ ನೀಡುವ ಸಲಕರಣೆಗಳನ್ನು ಸಂಸ್ಕರಿಸಲು ಅವುಗಳನ್ನು ನೀರಿನಲ್ಲಿ 20 ನಿಮಿಷ ಕುದಿಸಬೇಕು. ಕ್ರಿಮಿನಾಶಕ ದ್ರಾವಣಗಳನ್ನು ಉಪಯೋಗಿಸಬೇಡಿ.

ಪ್ರತಿಯೊಂದು ಚುಚ್ಚಿಗೂ ಸಂಸ್ಕರಿಸಿದ ಬೇರೆ ಸೂಜಿಯನ್ನೇ (ಬಿಸಿಜಿ ಹೊರತಾಗಿ) ಉಪಯೋಗಿಸಬೇಕು.

ಕಲುಷಿತಗೊಂಡಿದೆ ಅಂದರೆ ಸೂಕ್ಷ್ಮ ರೋಗಾಣುಗಳಿಂದ ಕೂಡಿದೆ ಎಂದರ್ಥ.

ಸಂಸ್ಕರಿಸದೆ ಇರುವ ಯಾವುದೇ ವಸ್ತುವಿನ ಮೇಲೆ ಸೂಕ್ಷ್ಮ ರೋಗಾಣುಗಳಿರುತ್ತವೆ.

ನೀವು ಸಂಸ್ಕರಿಸಿದ ಸಲಕರಣೆಯನ್ನು ಮುಟ್ಟಿದ ತಕ್ಷಣ, ಮೇಜಿನ ಮೇಲೆ ಇಟ್ಟಾಗ ಅಥವಾ ಬಳಸಿದ ನಂತರ ಅದರ ಮೇಲೆ ಸೂಕ್ಷ್ಮ ರೋಗಾಣುಗಳು ಸೇರಲಾರಂಭಿಸುತ್ತದೆ.

ಆಗ ಅದು ಅಸಂಸ್ಕರಿತ ಅಥವಾ ಕಲುಷಿತವಾಗಿದೆ ಎಂದರ್ಥ.

ನೀವು ಉಪಯೋಗಿಸಿದಾಗ ಸಲಕರಣೆಗಳು ತಕ್ಷಣ ಕಲುಷಿತವಾಗುವುದರಿಂದ ಸಿರೆಂಜು ಮತ್ತು ಸೂಜಿಗಳನ್ನು ಎಚ್ಚರಿಕೆಯಿಂದ ಹಿಡಿದಾಡಬೇಕು.

## 3.3 ಸಿರೆಂಜುಗಳನ್ನು ಹಿಡಿಯುವುದು : (ಉಪಯೋಗಿಸುವಾಗ ಅವುಗಳನ್ನು ಸಂಸ್ಕರಣಗೊಳಿಸಬೇಕು)

1. ಸಲಕರಣೆಗಳನ್ನು ಸಂಸ್ಕರಣಗೊಂಡ ಮುಚ್ಚಿದ ಪಾತ್ರೆಯಲ್ಲಿಡಿ (ಚಿತ್ರ 3.2) (ಸಲಕರಣೆಗಳನ್ನು ಸಂಸ್ಕರಿಸಲು ಉಪಯೋಗಿಸಿದ ಪಾತ್ರೆಯನ್ನೆ ಪದೆ ಪದೆ ಉಪಯೋಗಿಸಬಹುದು).



ಚಿತ್ರ 3.2

2. ಸಲಕರಣೆಗಳನ್ನೆತ್ತಲು ಸಂಸ್ಕರಿಸಿದ ಚಿಮ್ಮಟಿಗೆಯನ್ನುಪಯೋಗಿಸಿ (ಚಿತ 3:3)
   ನಿಮ್ಮ ಚಿಮ್ಮಟಿಗೆಗಳನ್ನು ಅವುಗಳನ್ನು ಸಂಸ್ಕರಿಸಿದ ಪಾತ್ರೆಯಲ್ಲಿಡಿ (ಚಿತ್ರ 3.4)
   ನಿಮ್ಮ ಕೈಗಳನ್ನು ಸಲಕರಣೆಗಳಿರುವ ಪಾತ್ರೆಗಳಲ್ಲಿ ಇಡಬೇಡಿ.ಹಾಗೆ ಇಟ್ಟರೆ ಅವುಗಳೆಲ್ಲವನ್ನು ಕಲುಷಿತಗೊಳಿಸುವಿರಿ.



ಚಿತ್ರ 3–3



ಚಿತ್ರ 3–4

## 3.4 ನಿಮ್ಮ ಕೈಗಳನ್ನು ಆಗಾಗ್ಗೆ ತೊಳೆಯಿರಿ (ಚಿತ್ರ 3.5)

ತೊಳೆಯುವುದರಿಂದ ಬಹಳಷ್ಟು ರೋಗಾಣುಗಳು ಹೋಗುತ್ತವೆ. ಆದರೆ ಕೆಲವು ಯಾವಾಗಲೂ ಉಳಿಯುತ್ತವೆ. ಕೈ ತೊಳೆದ ಮೇಲೂ ನೀವು ಏನನ್ನಾದರೂ ಮುಟ್ಟುವಾಗ ಎಚ್ಚರ ವಹಿಸಿ.



ಚಿತ್ರ 3–5

**ನೆನಪಿಡಿ**

ಸಂಸ್ಕರಿಸಿದ ಸಿರೆಂಜುಗಳನ್ನು ಮುಟ್ಟುವ ಮೊದಲು ಕೈ ತೊಳೆಯಿರಿ
ಸಂಸ್ಕರಿಸಿದ ಸಿರೆಂಜು ಮತ್ತು ಸೂಜಿಗಳನ್ನು ಸಂಸ್ಕರಿಸಿ ಮುಚ್ಚಿದ ಪಾತ್ರೆಯಲ್ಲಿಡಿ
ಸಿರೆಂಜು ಮತ್ತು ಸೂಜಿಗಳನ್ನೆತ್ತಿಕೊಳ್ಳಲು ಚಿಮ್ಮಟಿಗೆಯನ್ನುಪಯೋಗಿಸಿ

## 3.5 ಸಿರೆಂಜುಗಳನ್ನು ಹಿಡಿಯುವಿಕೆ : ನಳಿಕೆ ಮುಣೆಗಣೆ ಮತ್ತು ಸೂಜಿಗಳನ್ನು ಸೇರಿಸುವುದು

ಸಂಸ್ಕರಿಸಬೇಕಾದರೆ ಭಾಗಗಳನ್ನು ಬೇರ್ಪಡಿಸಿ
ಉಪಯೋಗಿಸಬೇಕಾದರೆ ಭಾಗಗಳನ್ನು ಒಟ್ಟುಗೂಡಿಸಿ
ಭಾಗಗಳನ್ನು ಒಟ್ಟುಗೂಡಿಸಲು ಚಿಮ್ಮಟಿಗೆಯನ್ನುಪಯೋಗಿಸಿ

1. ನಳಿಕೆಯನ್ನೆತ್ತಲು ಚಿಮ್ಮಟಿಗೆ ಉಪಯೋಗಿಸಿ ಮತ್ತು ಅದನ್ನು ನಿಮ್ಮ ಇನ್ನೊಂದು ಕೈಯಲ್ಲಿಡಿ. (ಚಿತ್ರ 3.6)



ಚಿತ್ರ 3.6

2. ಮುಳುಗಣಯನ್ನು ಎತ್ತಲು ಚಿಮ್ಮಟಿಗೆಯನ್ನುಪಯೋಗಿಸಿ ಮತ್ತು ಅದನ್ನು ನಳಿಕೆಯಲ್ಲಿಡಿ (ಚಿತ್ರ 3.7)



ಚಿತ್ರ 3.7

### 3.6 ಸೂಜಿಯನ್ನೆತ್ತಲು ಚಿಮ್ಮಟಿಗೆಯನ್ನುಪಯೋಗಿಸಿ

ಸೂಜಿಯನ್ನು ಅದರ ಕೊರಳಣೆಯಿಂದ ಹಿಡಿಯಿರಿ ಮತ್ತು ಅದನ್ನು ಸಿರೆಂಜಿನ ಕೊರಳಣಿಗೆ ಸೇರಿಸಿ. (ಚಿತ್ರ 3.8)
ಸೂಜಿಯನ್ನು 1/4 ಸುತ್ತಗೆ ಸುತ್ತಿ ಅದನ್ನು ಭದ್ರವಾಗಿ ಕೂಡಿಸಿ.
ಗಾಜಿನ ಸಿರೆಂಜಿನ ಕೊರಳಣೆಗೆಗಳು ಸುಲಭವಾಗಿ ಒಡೆಯುತ್ತವೆ. ಎಚ್ಚರವಹಿಸಿ.



ಚಿತ್ರ 3.8

### 3.7 ಈಗ ಸಿರೆಂಜನ್ನು ನಿಮ್ಮ ಕೈಯಲ್ಲಿ ಎಚ್ಚರಿಕೆಯಿಂದ ಹಿಡಿಯಿರಿ

ಯಾವಾಗಲೂ ಇವುಗಳನ್ನು ಮುಟ್ಟದಂತೆ ಎಚ್ಚರವಹಿಸಿ ;

— ನಳಿಕೆಯ ಕೊರಳಣಿ
— ಮುಳಗಣಿಕೆಯ ಮುದ್ರೆ
— ಸೂಜಿಯ ದಂಡ ಅಥವಾ ತುದಿ

ಈ ಬಾಗಗಳಿಂದ ರೋಗಾಣುಗಳು ಸುಲಭವಾಗಿ ಮಗುವಿನ ದೇಹವನ್ನು ಸೇರಬಹುದು.

ನೀವು ಕೇವಲ ಸುರಕ್ಷಿತ ಭಾಗಗಳನ್ನು ಮುಟ್ಟಬೇಕು :

— ನಳಿಕೆಯ ಹೊರಭಾಗ
— ಮುಳುಗಣಿಯ ಮೇಲ್ಭಾಗ

ಸಂಸ್ಕರಿಸಿದ ಸೂಜಿಯನ್ನು ಅರಳೆಯಿಂದ ಮುಟ್ಟಬೇಡಿ.




ಚಿತ್ರ 3.9

ನೀವು ಮುಟ್ಟಬಾರದ ಸಿರೆಂಜು ಮತ್ತು ಸೂಜಿಯ ಭಾಗಗಳು

**ಸಿರೆಂಜುಗಳನ್ನು ಹಿಡಿಯುವಿಕೆ : ಅವುಗಳನ್ನು ತುಂಬುವುದು ಮತ್ತು ಖಾಲಿ ಮಾಡುವುದು**

ಸುರಕ್ಷಿತ ಭಾಗಗಳನ್ನೇ ಮುಟ್ಟುವ ಎಚ್ಚರಿಕೆ ವಹಿಸಿ

ಸಿರೆಂಜನ್ನು ತುಂಬುವಾಗ

* ಲ[illegible] ಸೀಸೆ ಮತ್ತು ನಳಿಕೆ ಸೂಜಿಯ ತುದಿಗೆ ನಿಮ್ಮ ಎಡಗೈ ಆಧಾರ ಕೊಡಿ.
* ಮುಳುಗುಣಿಯ ಮೇಲ್ಭಾಗವನ್ನು ಬಲಗೈ ಹೆಬ್ಬೆರಳು ಮತ್ತು ಮಧ್ಯದ ಬೆರಳಿನಿಂದ ಮೇಲೆಳೆಯಿರಿ.
* ನಿಮ್ಮ ಬಲಗೈಯ ತೋರು ಬೆರಳಿನಿಂದ ನಳಿಕೆಯ ಮೇಲ್ಭಾಗವನ್ನು ಆಚೆ ತಳ್ಳಿ.



ಚಿತ್ರ 3.10 ಸಿರೆಂಜನ್ನು ತುಂಬುವುದು

**ಸಿರೆಂಜನ್ನು ಖಾಲಿಮಾಡುವಾಗ**

* ನಳಿಕೆಯ ಮೇಲ್ಭಾಗವನ್ನು ನಿಮ್ಮ ಬಲಗೈಯ ತೋರು ಬೆರಳು ಮತ್ತು ಮಧ್ಯದ ಬೆರಳುಗಳ ಮಧ್ಯೆ ಹಿಡಿಯಿರಿ.
* ಮುಳುಗಣೆಯ ಮೇಲ್ಭಾಗವನ್ನು ನಿಮ್ಮ ಹೆಬ್ಬೆರಳಿನಿಂದ ಒಳಕ್ಕೆ ತಳ್ಳಿ.
* ನಿಮ್ಮ ಎಡಗೈ ಖಾಲಿ ಮಾಡುತ್ತಿರುವ ಸೀಸೆಯನ್ನು ಹಿಡಿದಿರುತ್ತದೆ.



ಚಿತ್ರ 3.11 ಸಿರೆಂಜನ್ನು ಖಾಲಿಮಾಡುವುದು

## 3.9 ನಿಮ್ಮ ಉಪಕರಣಗಳನ್ನು ಎಲ್ಲಿ ಮತ್ತು ಯಾವಾಗ ಸಂಸ್ಕರಿಸುವಿರಿ

ಇದು ನಿಮ್ಮ ಕಾರ್ಯಕ್ರಮ ಮತ್ತು ಪರಿಸ್ಥಿತಿಯನ್ನವಲಂಬಿಸುತ್ತದೆ.

ನೀವು ಕೆಳಕಂಡ ಕಡೆ ಉಪಕರಣಗಳನ್ನು ಸ್ವಚ್ಛಮಾಡಿ ಸಂಸ್ಕರಿಸಬಹುದು

* ಲಸಿಕೆ ನೀಡಲು ಹೊರಡುವ ಮುಂಚೆ ಆರೋಗ್ಯಕೇಂದ್ರದಲ್ಲಿ
* ಲಸಿಕೆ ನೀಡುವ ಸ್ಥಳದಲ್ಲಿ, ನೀಡುವ ಸಮಯದಲ್ಲಿ
* ನೀವು ಹಿಂತಿರುಗಿದ ಮೇಲೆ ಆರೋಗ್ಯ ಕೇಂದ್ರದಲ್ಲಿ

---

ಸಿರೆಂಜು ಮತ್ತು ಸೂಜಿಗಳನ್ನು ಉಪಯೋಗಿಸಿದಾಗಲೆಲ್ಲಾ ಸಂಸ್ಕರಿಸಿ

---

## 3.10 ಉಪಕರಣಗಳನ್ನು ಸ್ವಚ್ಛಮಾಡುವ ಬಗೆ

ಉಪಕರಣಗಳನ್ನು ಲಸಿಕೆ ನೀಡುವ ಕೆಲಸ ಮುಗಿದ ತಕ್ಷಣ ಅದೇ ಸ್ಥಳದಲ್ಲಿ ಅಥವಾ ಆರೋಗ್ಯ ಕೇಂದ್ರಕ್ಕೆ ಹಿಂತಿರುಗಿದ ತಕ್ಷಣ ಸ್ವಚ್ಛಮಾಡಿ, ಕೊಳೆ ಬಿಗಿಯಾಗಿ ಅಂಟಿಕೊಳ್ಳುವ ಮುನ್ನ ತೆಗೆಯುವುದು ಸುಲಭ



ಚಿತ್ರ 3.12 ಉಪಯೋಗಿಸಿದ ಸಿರೆಂಜು ಮತ್ತು ಸೂಜಿಗಳು ನೀರಿನ ಪಾತ್ರೆಯಲ್ಲಿ ನೆನೆಸುತ್ತಿರುವುದು.

**ಸಿರೆಂಜುಗಳನ್ನು ತೊಳೆಯುವುದು**

1. ನೀವು ತಯಾರಾಗುವವರೆಗೆ ಅವುಗಳನ್ನು ಸ್ವಚ್ಛ ನೀರಿನಲ್ಲಿ ನೆನೆಯಲು ಇಡಿ.
2. ಸಿರೆಂಜಿನಲ್ಲಿ ಸ್ವಚ್ಛ ನೀರನ್ನೆಳೆದು ಖಾಲಿ ಮಾಡಿ (ಚುಚ್ಚುಮದ್ದು ಕೊಡುವಾಗ ಮಾಡುವ ಹಾಗೆ) ಹಾಗೆ ಬಹಳ ಸಲ ಮಾಡಿ (ಚಿತ್ರ 3.13)
3. ಮುಳುಗುಣಿಯನ್ನು ನಳಿಕೆಯಿಂದ ಹೊರತೆಗೆದು ಪ್ರತಿಯೊಂದು ಭಾಗವನ್ನು ಎಚ್ಚರಿಕೆಯಿಂದ ಸ್ವಚ್ಛಮಾಡಿ.



ಚಿತ್ರ 3.13 ಸಿರೆಂಜು ಮತ್ತು ಸೂಜಿಯನ್ನು ನೀರಿನಿಂದ ತೊಳೆಯುವುದು.

**ಸೂಜಿಗಳನ್ನು ಸ್ವಚ್ಛಮಾಡುವುದು**

1. 10 ಮಿ. ಲೀನ ಒಂದು ಸ್ವಚ್ಛ ಸಿರೆಂಜನ್ನು ತೆಗೆದುಕೊಂಡು ಅದರಲ್ಲಿ ನೀರನ್ನು ತುಂಬಿಕೊಳ್ಳಿ. ಈಗ ಪ್ರತಿಯೊಂದು ಸೂಜಿಯಲ್ಲಿ ನೀರನ್ನು ಇಂಜೆಕ್ಷನ್ ಕೊಡುವವರ ಹಾಗೆ ಬಹಳ ಸಲ ಹಾಯಿಸಿ.

## 3.11 ಸಂಸ್ಕರಿಸುವಿಕೆಗೆ ಬೇಕಾಗುವ ಸಾಧನಗಳು

ಸಂಸ್ಕರಿಸಲು ವಿವಿಧ ಬಗೆಯ ಉಪಕರಣಗಳಿವೆ. ಚಿತ್ರ 3.14 ರಲ್ಲಿ ವಿದ್ಯುತ್ ಸೌಲಭ್ಯ ಅಥವಾ ವಿದ್ಯುತ್ ಸಂಸ್ಕರಣ ಸಾಧ್ಯವಿಲ್ಲದ ಕಡೆ ಸ್ಥಳದಲ್ಲೇ ಉಪಯೋಗಿಸಬಹುದಾದ ಕೆಲವು ಉಪಕರಣಗಳನ್ನು ನೋಡಬಹುದು. ಇತರ ವಿಧಾನ ಮತ್ತು ವಿವಿಧ ಉಪಕರಣಗಳಿಗೂ ಇದೇ ಸೂತ್ರಗಳು ಅನ್ವಯಿಸುತ್ತವೆ.

1. ಒಂದು ಸೀಮೆ ಎಣ್ಣೆ ಸ್ಟೌವ್
2. ಸೀಮೆ ಎಣ್ಣೆ ತುಂಬಿದ ಒಂದು ಸೀಸೆ ಅಥವಾ ಬೇರಾವುದೇ ಇಂಧನ ಸ್ಟೋವ್‌ನ್ನು ಎರುವಲು ಪಡೆದರೂ ಅದಕ್ಕೆ ಸೀಮೆ ಎಣ್ಣೆಯನ್ನು ಒದಗಿಸಬೇಕಾಗುತ್ತದೆ.
3. ಬೆಂಕಿ ಕಡ್ಡಿ
4. ಉಪಕರಣಗಳನ್ನು ಕುದಿಸಲು ಮುಚ್ಚಳವಿರುವ ಸಾಮಾನ್ಯವಾದ ಒಂದು ದುಂಡು ಪಾತ್ರೆ ಇದೆ. ಚಕ್ಕ ಚೌಕ ಸಂಸ್ಕರಣಾ ಪಾತ್ರೆಯೂ ಆಗಬಹುದು ನಿಮ್ಮ ಎರಡು ಪಾತ್ರೆಗಳಿಗೂ ಒಳಗಡೆ ಒಂದು ತಟ್ಟೆ ಇದ್ದರೆ ಉಪಕರಣಗಳನ್ನೆತ್ತಲು ಇನ್ನೂ ಅನುಕೂಲ.
5. ಸೂಜಿಗಳಿಗೆ ಮುಚ್ಚಳವಿರುವ ಒಂದು ಚಿಕ್ಕ ಡಬ್ಬಿ
6. ಗಾಜ್ ಅಥವಾ ಯಾವುದೇ ಅರಳೆಬಟ್ಟೆ (ನೈಲಾನ್, ಪಾಲಿಎಸ್ಟರ್ ಇತ್ಯಾದಿ ಬಟ್ಟೆ ಸೂಕ್ತವಲ್ಲ)




ಚಿತ್ರ 3.14 ಸಂಸ್ಕರಣೆಯ ಉಪಕರಣಗಳು

## 3.12 ಸಂಸ್ಕರಣ ; ಉಪಕರಣಗಳನ್ನು ಹೇಗೆ ತುಂಬುವುದು

ಸಿರಿಂಜುಗಳನ್ನು ತುಂಬುವುದು

1. ನಳಿಕೆಗಳಿಂದ ಮುಳುಗುಣಿಕೆಗಳನ್ನು ಹೊರತೆಗೆಯಿರಿ

2. ಗಾಜಿನ ಸಿರೆಂಜುಗಳನ್ನು ನೂಲಿನ ಬಟ್ಟೆ ಅಥವಾ ಜಾಲರಿಯಲ್ಲಿ ಸುತ್ತಿ. ಇದು ಅವುಗಳನ್ನು ಸಾಗಿಸುವಾಗ ಒಡೆಯದಂತೆ ರಕ್ಷಿಸುತ್ತದೆ ಆರೋಗ್ಯ ಕೇಂದ್ರದಲ್ಲೇ ಲಸಿಕೆ ನೀಡುವುದಿದ್ದರೆ ಅದನ್ನು ಬಟ್ಟೆಯಲ್ಲಿ ಸುತ್ತಬೇಕಾಗಿಲ್ಲ.

— 20 ಸೆಂ. ಮೀ. ಉದ್ದದ ಜಾಲರಿಯನ್ನು ಸುರುಳಿಯಿಂದ ಕತ್ತರಿಸಿ.

— ಪ್ರತಿಯೊಂದು ಸಿರೆಂಜಿಗೆ ಒಂದು ಜಾಲರಿ ತುಂಡನ್ನು ಉಪಯೋಗಿಸಿ.

— ಮುಳುಗುಣಿಕೆ ಮತ್ತು ನಳಿಕೆ ಒಂದಕ್ಕೊಂದು ಹೊಂದಿಕೆಯಾಗುವುದೆಂಬುದನ್ನು ನೋಡಿಕೊಳ್ಳಿ.

— ಮೊದಲು ಜಾಲರಿಯನ್ನು ಮುಳುಗುಣಿಕೆಯ ಸುತ್ತ ಸುತ್ತಿ. ನಂತರ ನಳಿಕೆಯ ಸುತ್ತ ಸುತ್ತಿ ಅಂದರೆ ಪ್ರತಿ ಜೋಡಿಗಳ ಮಧ್ಯೆ ಮತ್ತು ಸುತ್ತ ಜಾಲರಿ ಇರುವಂತಾಗಬೇಕು.



ಚಿತ್ರ 3.15 ಮುಳುಗುಣಿಕೆ ಮತ್ತು ನಳಿಕೆಯನ್ನು ಜಾಲರಿ ಅಥವಾ ಬಟ್ಟೆಯಲ್ಲಿ ಸುತ್ತುವುದು

3. ಬಟ್ಟೆ ಸುತ್ತಿದ ಗಾಜಿನ ಸಿರೆಂಜುಗಳನ್ನು ಸಂಸ್ಕರಣ ಪಾತ್ರೆಯಲ್ಲಿ ಸರಿಯಾಗಿ ಇಡಿ.

ಸೂಜಿಗಳನ್ನು ಹಾಕುವುದು

1. ಸೂಜಿಗಳನ್ನು ಅವುಗಳ ಡಬ್ಬದಲ್ಲಿ ಹಾಕಿ ಅಥವಾ ಒಂದು ಬಟ್ಟೆಯ ಜಾಲರಿ ಅಥವಾ ಹತ್ತಿಯ ಚೂರಿಗೆ ಸಿಕ್ಕಿಸಿ. ಬಿಸಿಜಿ ಸೂಜಿಗಳು ಬಹಳ ಚಿಕ್ಕವಿರುವುದರಿಂದ ಅವುಗಳನ್ನು ಜಾಲರಿಗೆ ಸಿಕ್ಕುವುದು ಕಷ್ಟ.

2. ಸೂಜಿಯ ಡಬ್ಬಿಯ ಮುಚ್ಚಳ ತೆಗೆದಿಡಿ ಅದನ್ನು ಸಿರೆಂಜುಗಳ ಮೇಲಿಡಿ. ಮುಚ್ಚಳವನ್ನು ಅದರ ಪಕ್ಕದಲ್ಲಿಡಿ.

ಚಿಮುಟವನ್ನು ಹಾಕುವುದು

1. ಸಂಸ್ಕರಿಸುವ ಪಾತ್ರೆಯಲ್ಲಿ ಎರಡು ಜೊತೆ ಚಿಮುಟಗಳನ್ನು ಹಾಕಿ.

2. ಪ್ರತಿ ಚಿಮುಟದ ಸುತ್ತ ಒಂದು ದಾರವನ್ನು ಹಾಯಿಸಿ ಇಡಿ. ಸಂಸ್ಕರಿಸಿದ ಮೇಲೆ ಪಾತ್ರೆಯಿಂದ ಅವನ್ನು ತೆಗೆಯಲು ಇದು ಸಹಾಯಕವಾಗುವುದು.

3. ಅವುಗಳನ್ನು ಇತರ ಉಪಕರಣಗಳ ಮೇಲಿಡಿ.



ಚಿತ್ರ 3.16 ಡಬ್ಬದಲ್ಲಿಟ್ಟ ಸೂಜಿಗಳು



ಚಿತ್ರ 3.17 ಬಟ್ಟೆಯ ಜಾಲರಿ ಅಥವಾ ಹತ್ತಿಗೆ ಸಿಕ್ಕಿಸಿದ ಸೂಜಿಗಳು



ಚಿತ್ರ 3.18 ಸಂಸ್ಕರಿಸುವ ಪಾತ್ರೆಯಲ್ಲಿ ಎರಡು ಜೋಡಿ ಚಿಮುಟಗಳು

## 3·13 ಸಂಸ್ಕರಿಸುವುದು ಉಪಕರಣಗಳನ್ನು ಹೇಗೆ ಕುದಿಸುವುದು

1. ಉಪಕರಣಗಳ ಮೇಲೆ ಕನಿಷ್ಠ 2 ಸೆ. ಮಿ. ನಿಲ್ಲುವಷ್ಟು ನೀರನ್ನು ಪಾತ್ರೆಯಲ್ಲಿ ಹಾಕಿ.

2. ಸ್ಟೋವ್‌ನ್ನು ಹಚ್ಚಿ

3. ಪಾತ್ರೆಯ ಮೇಲೆ ಮುಚ್ಚಳವಿಡಿ

4. ಪಾತ್ರೆಯನ್ನು ಸ್ಟೋವಿನ ಮೇಲಿಟ್ಟು ನೀರನ್ನು ಕುದಿಯುವವರೆಗೆ ಕಾಯಿಸಿ.

5. ನೀರು ಕುದಿಯಲಾರಂಭಿಸಿದ ಮೇಲೆ ಕನಿಷ್ಠ 20 ನಿಮಿಷ ಉಪಕರಣಗಳನ್ನು ಕುದಿಸಿ. 20 ನಿಮಿಷಕ್ಕಿಂತ ಕಡಿಮೆ ಕುದಿಸಿದರೆ, ಎಲ್ಲ ಸೂಕ್ಷ್ಮ ಕ್ರಿಮಿಗಳನ್ನು ಸಾಯಿಸಿದಂತಾಗುವುದಿಲ್ಲ.

6. ನೀರು ಕುದಿಯಲಾರಂಭಿಸಿದ ಮೇಲೆ ಪಾತ್ರೆಯಲ್ಲಿ ಹೆಚ್ಚಿನದೇನನ್ನೂ ಹಾಕಬೇಡಿ.

ಏಕೆಂದರೆ—

* ನೀವು ಕುದಿಯುವ ನೀರಿನಲ್ಲಿ ನೇರವಾಗಿ ತಣ್ಣನೆಯ ಗಾಜಿನ ಸಿರಿಂಜ್ ಹಾಕಿದರೆ ಅದು ಒಡೆಯಬಲ್ಲುದು.

* ನೀವು ಮತ್ತೊಮ್ಮೆ 20 ನಿಮಿಷಗಳಷ್ಟು ಕಾಯಿಸಬೇಕು. ಇಲ್ಲದಿದ್ದರೆ ಉಪಕರಣಗಳು ಸರಿಯಾಗಿ ಸಂಸ್ಕರಣಗೊಳ್ಳುವುದಿಲ್ಲ

ಸಂಸ್ಕರಿಸಿದ ಸಿರಿಂಜು ಮತ್ತು ಸೂಜಿಗಳನ್ನು ಆರಿಸಿದ ಮೇಲೆ ಉಪಯೋಗಿಸಿ.

| ನೆನಪಿಡಿ |
|---|
| ಉಪಕರಣಗಳನ್ನು ಕನಿಷ್ಠ 20 ನಿಮಿಷ ಕುದಿಸಿ<br>ಚಿಮುಟವನ್ನು ಉಪಕರಣಗಳ ಮೇಲೆ ಸಂಸ್ಕರಿಸಲು ಇಡಿ<br>ಕುದಿಯಲಾರಂಭಿಸಿದ ಮೇಲೆ ವಸ್ತುಗಳನ್ನು ಸೇರಿಸಬೇಡಿ. |

# 4. ಲಸಿಕೆಗಳನ್ನು ಕೊಡುವುದು ಹೇಗೆ?

## 4·1 ಲಸಿಕೆಗಳನ್ನು ಪರೀಕ್ಷಿಸುವುದು

ಯಾವುದೇ ಲಸಿಕೆಯನ್ನುಪಯೋಗಿಸುವ ಮುಂಚೆ

– ಅದು ಸರಿಯಾದ ಲಸಿಕೆ ಎನ್ನುವುದನ್ನು ಪರೀಕ್ಷಿಸಲು

– ನೀವು ಕೊಡಬೇಕಾದ ಪ್ರಮಾಣವನ್ನು ಪರೀಕ್ಷಿಸಲು

– ಲಸಿಕೆ ಇನ್ನು ಕೊನೆಯದಿನ ದಾಟಿಲ್ಲ ಎನ್ನುವುದನ್ನು ಪರೀಕ್ಷಿಸಲು

ಸೀಸೆಯ ಮೇಲಿನ ಪಟ್ಟಿಯನ್ನು ನೋಡಬೇಕು.

ಲಸಿಕೆಯ ಕೊನೆಯ ದಿನ ದಾಟಿದ್ದರೆ, ಅದನ್ನು ಉಪಯೋಗಿಸಬಾರದು.

**ನೆನಪಿಡಿ**

ಲಸಿಕೆಯ ಸೀಸೆಯ ಮೇಲಿನ ಪಟ್ಟಿಯನ್ನು ಪರೀಕ್ಷಿಸಿ

ಪ್ರಮಾಣವನ್ನು ಪರೀಕ್ಷಿಸಿ

ಕೊನೆಯ ದಿನವನ್ನು ಪರೀಕ್ಷಿಸಿ

ಕೊನೆಯ ದಿನ ಮುಗಿದ ಲಸಿಕೆಯನ್ನು ಎಂದೂ ಉಪಯೋಗಿಸಬೇಡಿ

## 4·2 ಲಸಿಕೆಯ ಸೀಸೆಗಳು

ಆಂಪ್ಯೂಲ್‌ಗಳು : ಇವು ಗಾಜಿನ ಸಣ್ಣ ಸೀಸೆಗಳಾಗಿದ್ದು ಸುಲಭವಾಗಿ ಒಡೆಯಬಹುದಾದ ಮೊನಚಾದ ತಳ್ಳನೆಯ ಮೇಲ್ಪದಿ ಹೊಂದಿರುತ್ತವೆ. ಇವುಗಳನ್ನು ಬಿಸಿಜಿ ಲಸಿಕೆಗೆ ಉಪಯೋಗಿಸುತ್ತಾರೆ.

### ಆಂಪ್ಯೂಲ್‌ನ ಮೇಲ್ಭಾಗ ಒಡೆಯಲು

ಆಂಪ್ಯೂಲನ್ನು ನಿಮ್ಮ ಎಡ ಹೆಬ್ಬೆರಳು ಮತ್ತು ಮಧ್ಯ ಬೆರಳಿನಲ್ಲಿ ಹಿಡಿಯಿರಿ.

ನಿಮ್ಮ ಎಡ ತೋರು ಬೆರಳಿನಿಂದ ಆಂಪ್ಯೂಲ್‌ನ ಕತ್ತಿನ ತುದಿಗೆ ಆಧಾರ ಕೊಡಿ

ವಿಶೇಷ ಲೋಹದ ಕೊಯ್ಯುವ ಸಾಧನದಿಂದ ಸೀಸೆಯ ಕತ್ತಿನ ಸುತ್ತಲೂ ಕೆರೆಯಿರಿ.

ಆಂಪ್ಯೂಲ್‌ನ ಹೊರಭಾಗವನ್ನು ಹತ್ತಿ ಮತ್ತು ಸ್ಪಿರಿಟ್ ಅಥವಾ ನೀರಿನಿಂದ ಸ್ವಚ್ಛ ಮಾಡಿ.

ಇದರಿಂದ ಕೆರೆಯುವಾಗ ಶೇಖರವಾದ ಗಾಜಿನ ಪುಡಿಯು ಲಸಿಕೆಯಲ್ಲಿ ಸೇರುವುದನ್ನು ತಪ್ಪಿಸಬಹುದು.

ಸೀಸೆಯ ಮೇಲ್ಪದಿಯನ್ನು ಮೃದುವಾಗಿ ತೆಗೆಯಿರಿ ನೀವು ಕೆರೆದ ಕಡೆ ಒಡೆದುಕೊಳ್ಳುತ್ತದೆ.



ಚಿತ್ರ 4.1 ಆಂಪ್ಯೂಲ್‌ನ ಕತ್ತನ್ನು ಕೆರೆಯುವುದು

## 4.3 ಲಸಿಕೆಯ ಸೀಸೆಗಳು (ವಯಾಲ್‌ಗಳು) :

ವಯಾಲ್‌ಗಳು ರಬ್ಬರ್ ಮುಚ್ಚಳವಿರುವ ಸಣ್ಣ ಶೀಶೆಗಳು. ಈ ಮುಚ್ಚಳವನ್ನು ಹಿಡಿದಿರಲು ಲೋಹದ ಕವಚವಿರುತ್ತದೆ, ಈ ಕವಚದ ಮಧ್ಯಭಾಗವನ್ನು ಸುಲಭವಾಗಿ ಎತ್ತಲು ಬರುವಂತೆ ಕೊಯ್ದಿರುತ್ತದೆ,



ಚಿತ್ರ 4.2 ವಯಾಲ್‌ಗಳು

**ವಯಾಲ್‌ನಿಂದ ದ್ರವವನ್ನು ಎಳೆದುಕೊಳ್ಳುವುದು**

ಒಂದು ಸಂಸ್ಕರಿಸಿದ ಸಿರೆಂಜು ಮತ್ತು ಸೂಜಿಯನ್ನು ತಯಾರಿಸಿಕೊಳ್ಳಿ

ವಯಾಲನಿಂದ ಎಳೆಯಬೇಕಾದ ದ್ರವದ ಗಾತ್ರದಷ್ಟು ಗಾಳಿಯನ್ನು ಸಿರೆಂಜಿನಲ್ಲಿ ಎಳೆದುಕೊಳ್ಳಿ.

ಸೂಜಿಯನ್ನು ವಯಾಲಿನ ರಬ್ಬರ್ ಮುಚ್ಚಳದ ಮುಖಾಂತರ ತೂರಿಸಿ.

ಗಾಳಿಯನ್ನು ಒಳಗೆ ತಳ್ಳಿ

ದ್ರವವನ್ನು ಎಳೆದುಕೊಳ್ಳಿ

ತಳ್ಳಿದ ಗಾಳಿಯು ವಯಾಲಿನಲ್ಲಿ ದ್ರವದ ಸ್ಥಳವನ್ನು ತೆಗೆದುಕೊಳ್ಳುವುದರಿಂದ, ದ್ರವವು ಸುಲಭವಾಗಿ ಸಿರೆಂಜಿಗೆ ಬರುವುದು

## 4·4 ಇಂಜೆಕ್ಷನ್ (ಚುಚ್ಚುಮದ್ದುಗಳು)

**ವಿವಿಧ ಬಗೆಯ ಚುಚ್ಚುಗಳು (ಇಂಜೆಕ್ಷನ್‌ಗಳು) :**

ನೀವು ವಿವಿಧ ಲಸಿಕೆಗಳನ್ನು ಬೇರೆ ಬೇರೆ ರೀತಿಯಲ್ಲಿ ಚುಚ್ಚುತ್ತೀರಿ.

ಅವೆಂದರೆ__

ಚರ್ಮದ ಒಳಗೆ (ಚರ್ಮದ ಮೇಲಿನ ಪೊರೆಯಲ್ಲಿ) ಬಿಸಿಜಿ.

ಚರ್ಮದ ಕೆಳಗೆ (ಚರ್ಮದ ತಕ್ಷಣದ ಕೆಳಗೆ) ದಡಾರ.

ಸ್ನಾಯುಗಳಲ್ಲಿ (ಸ್ನಾಯುಗಳ ಆಳದಲ್ಲಿ) ಡಿಪಿಟಿ. ಡಿಟಿ, ಟಿಟಿ ಮತ್ತು ಟೈಫಾಯಿಡ್




**ಚಿತ್ರ 4,3 ಸೂಜಿಯ ವಿವಿಧ ಚುಚ್ಚಿನ ಚಿತ್ರ**

**ಚುಚ್ಚುವ ಮೊದಲು ಚರ್ಮವನ್ನು ಸ್ವಚ್ಛಮಾಡುವುದು**

ಸ್ವಲ್ಪ ಹತ್ತಿ ಮತ್ತು ಸ್ವಲ್ಪ ಸ್ಪಿರಿಟ್ ಉಪಯೋಗಿಸಿ. ಸ್ಪಿರಿಟ್ ಇರದಿದ್ದರೆ ನೀರನ್ನುಪಯೋಗಿಸಿ

**ಇಂಜೆಕ್ಷನ್ (ಚುಚ್ಚಿದ) ನಂತರ**

ಒಂದು ಹತ್ತಿಯ ಅಥವಾ ಬಟ್ಟೆಯ ಜಾಲರಿಯ ಚೂರನ್ನು ಸಿದ್ಧವಾಗಿಟ್ಟುಕೊಳ್ಳಿ
ಸೂಜಿ ಚುಚ್ಚಿದ ಸ್ಥಳವನ್ನು ಒತ್ತಿ
ಸೂಜಿ ಸಣ್ಣ ರಕ್ತನಾಳವನ್ನು ಹರಿದಿದ್ದರೆ ಒಂದು ಹನಿ ರಕ್ತ ಕಾಣಿಸಿಕೊಳ್ಳಬಹುದು.
ರಕ್ತಸ್ರಾವ ನಿಲ್ಲುವವರೆಗೆ ಹತ್ತಿಯಿಂದ ನಯವಾಗಿ ಒತ್ತಿ ಹಿಡಿಯಿರಿ.

## 4.5 ಡಿ.ಪಿ.ಟಿ, ಡಿ.ಟಿ. ಮತ್ತು ಟಿಟಿ :- ಸಿರಿಂಜನ್ನು ತುಂಬುವುದು

ನೀವು ಡಿಪಿಟಿ ಮತ್ತು ಡಿಟಿ ಅಥವಾ ಟಿ. ಟಿ. ಲಸಿಕೆಯನ್ನುಪಯೋಗಿಸುವ ಮುಂಚೆ

1. ಸೀಸೆಯ ಮೇಲಿನ ಪಟ್ಟಿಯನ್ನು ಪರೀಕ್ಷಿಸಿ.
2. ಸೀಸೆಯನ್ನು ಅಲ್ಲಾಡಿಸಿ ಅಂದರೆ ಕೆಳಗೆ ಸೇರಿದ ಕಣಗಳು ಲಸಿಕೆಯಲ್ಲಿ ಚೆನ್ನಾಗಿ ಮಿಶ್ರಣವಾಗುತ್ತವೆ. ಅದು ಹಿಮಗಟ್ಟಿರಲೂಬಹುದು ಅದು ಮಂಜುಗಟ್ಟಿರ ಬೇಕೆಂದನಿಸಿದರೆ ಕುಲುಕಿ ಪರೀಕ್ಷಿಸಿ
3. ಲೋಹದ ಮಧ್ಯಭಾಗವನ್ನು ಆಂಪ್ಯೂಲ್ ಕೊಯ್ಯುವ ಸಾಧನದಿಂದ ಮೇಲಕ್ಕೆತ್ತಿ
4. ಲಸಿಕೆಯ ಸೀಸೆಯನ್ನು ಹಿಮ ಒತ್ತೆಯ ಮೇಲೆ ಅಥವಾ ಮಂಜುಗಡ್ಡೆಗಳಿರುವ ಬಟ್ಟಲಿನಲ್ಲಿಡಿ.
5. ಚಿಮ್ಮುಟದಿಂದ 2 ಮಿ. ಲಿ. ಸಂಸ್ಕರಿತ ಸಿರೆಂಜನ್ನು ತೆಗೆದುಕೊಳ್ಳಿ.
6. ಚಿಮ್ಮುಟದಿಂದಲೇ 30 ಮಿ. ಮಿ. ಉದ್ದದ 22 ಗಾಜ ಗಾತ್ರದ ಸೂಜಿಯನ್ನು ಸಿರೆಂಜಿಗೆ ಜೋಡಿಸಿ. ಸಿರೆಂಜನ್ನು ತುಂಬಲು ಮತ್ತು ಮಗುವಿಗೆ ಚುಚ್ಚುಮದ್ದು ಕೊಡಲು ಅದೇ ಸೂಜಿಯನ್ನು ಬಳಸಿ.
7. ತೆಗೆದ ರಬ್ಬರಿನ ಮುಚ್ಚಳವನ್ನು ಸ್ಪಿರಿಟ್ ಅಥವಾ ಕುದಿಯುವ ನೀರಿನಲ್ಲಿ ತೋಯಿಸಿದ ಹತ್ತಿಯಿಂದ ಸ್ವಚ್ಛಮಾಡಿ.
8. 0.5 ಮಿ. ಲೀ ಲಸಿಕೆಯನ್ನು ಸಿರೆಂಜಿನಲ್ಲಿ ಎಳೆದುಕೊಳ್ಳಿ.

**ಡಿಪಿಟಿ ಲಸಿಕೆಗಾಗಿ ನೆನಪಿಡಿ**

0.5 ಮಿ, ಲಿ. ನ್ನು 4 ವಾರಗಳ ಅಂತರದಲ್ಲಿ 3 ಸಲ ಕೊಡಿ
ಮಗುವಿನ ತೊಡೆಯ ಸ್ನಾಯುಗಳಲ್ಲಿ ಕೊಡಿ
ಲಸಿಕೆಯನ್ನು ಹಿಮಗಟ್ಟಿಸಬೇಡಿ

**ಸ್ನಾಯುಗಳಲ್ಲಿ ಚುಚ್ಚು (ಇಂಜೆಕ್ಷನ್)**

ಮಗುವಿನ ಮಧ್ಯ ತೊಡೆಯ ಹೊರಭಾಗ ಈ ಚುಚ್ಚು ಕೊಡಲು ಅತ್ಯುತ್ತಮ ಸ್ಥಳ
ನೀವು ಪೃಷ್ಠದಲ್ಲಿ ಚುಚ್ಚು ಕೊಟ್ಟರೆ, ಕಾಲಿನ ಪಾರ್ಶ್ವವಾಯು ಉಂಟಾಗಬಹುದು, ಚಿಕ್ಕ ಮಕ್ಕಳಲ್ಲಿ ತೋಳಿನ ಸ್ನಾಯುಗಳು ಚಿಕ್ಕದಾಗಿರುತ್ತವೆ.

ಆದ್ದರಿಂದ ಅನೇಕ ದೇಶಗಳಲ್ಲಿ ಆರೋಗ್ಯ ಕಾರ್ಯಕರ್ತರು ಇಂಜೆಕ್ಷನ್‌ಗೆ ಸ್ಪಿರಿಟ್ ಹಚ್ಚುವುದಿಲ್ಲ

ನಿಮ್ಮ ಹೆಬ್ಬೆರಳು ಮತ್ತು ತೋರುಬೆರಳನ್ನು ಚುಚ್ಚುವ ಸ್ಥಳದ ಎರಡೂ ಪಕ್ಕದಲ್ಲಿಡಿ.

ಈ ಎರಡು ಬೆರಳುಗಳ ಮಧ್ಯದ ಚರ್ಮವನ್ನು ಹಿಗ್ಗಿಸಿ,

ನಿಮ್ಮ ಬೆರಳುಗಳ ಮಧ್ಯದ ಚರ್ಮದಲ್ಲಿ ಸೂಜಿಯನ್ನು ಬೇಗ ಮತ್ತು ನೇರವಾಗಿ ಚುಚ್ಚಿ ಸ್ನಾಯುಗಳ ಆಳದಲ್ಲಿ ಹೋಗಿಸಿ.

ಮುಳುಗುಣೆಯನ್ನು ಸ್ವಲ್ಪ ಹಿಂದಕ್ಕೆಳೆದು, ನಿಮ್ಮ ಸೂಜಿ ರಕ್ತನಾಳದಲ್ಲಿ ಇಲ್ಲವೆನ್ನುವುದನ್ನು ಖಚಿತ ಪಡಿಸಿಕೊಳ್ಳಿ.

ಮುಳುಗುಣೆಯ ಮೇಲ್ಭಾಗವನ್ನು ನಿಮ್ಮ ಹೆಬ್ಬೆರಳಿನಿಂದ ಲಸಿಕೆಯನ್ನು ತಳ್ಳಿ.

ಸೂಜಿಯನ್ನು ಹಿಂದಕ್ಕೆಳೆದುಕೊಳ್ಳಿ.




ಚಿತ್ರ 4.4 ಡಿಪಿಟಿಯ ಡೋಸ್‌ಗಳು

### 4.6 ಟಿಟಿ (ಧನುರ್ವಾಯು ಲಸಿಕೆ) ಯನ್ನು ಸ್ನಾಯುಗಳ ಆಳದಲ್ಲಿ ಕೊಡುವುದು

ಸೀಸೆಯ ಮೇಲಿನ ಪಟ್ಟಿಯನ್ನು ಪರೀಕ್ಷಿಸಿ

ಲಸಿಕೆಯನ್ನು ಡಿಪಿಟಿ ಲಸಿಕೆಯಂತೆಯೇ ಕುಲುಕಿರಿ.

ಡಿಪಿಟಿ ಯ ಹಾಗೆಯೇ ಸಿರೆಂಜನ್ನು ತುಂಬಿರಿ.

ಗರ್ಭಿಣಿಯರಿಗೆ ಸ್ನಾಯುಗಳಲ್ಲಿ ಚುಚ್ಚು ಕೊಡಲು ಎಡ ಮೇಲ್‌ಗೈಯ ಹೊರಭಾಗ ಒಳ್ಳೆಯ ಸ್ಥಳ.

ಸೂಜಿಯನ್ನು ಚರ್ಮದ ಮುಖಾಂತರ, ನೇರವಾಗಿ ತೀವ್ರವಾಗಿ ಸ್ನಾಯುಗಳಲ್ಲಿ ಚುಚ್ಚಿ.

ರಕ್ತಕ್ಕಾಗಿ ಪರೀಕ್ಷಿಸಲು ಮುಳಗುಣೆಯನ್ನು ಸ್ವಲ್ಪ ಹಿಂದಕ್ಕೆಳೆದುಕೊಳ್ಳಿ.

ಲಸಿಕೆಯನ್ನು ಚುಚ್ಚಿ

ಸೂಜಿಯನ್ನು ಹಿಂದಕ್ಕೆಳೆಯಿರಿ.

**ಧನುರ್ವಾಯು ಚುಚ್ಚಿಗೆ (ಟಿಟಿಗೆ) ನೆನಪಿಡಿ**

ಗರ್ಭಾವಸ್ಥೆಯಲ್ಲಿ 0.5 ಮಿ. ಲೀ ಎರಡು ಸಲ ಕೊಡಿ

ಸ್ನಾಯುಗಳಲ್ಲಿ ಚುಚ್ಚಿ

ಲಸಿಕೆಯನ್ನು ಹಿಮಗಟ್ಟಿಸಬೇಡಿ

## 4.7 ಬಾಯಿಗೆ ಹಾಕುವ ಪೋಲಿಯೋ ಲಸಿಕೆ ಕೊಡಲು ಹೇಗೆ ಸಿದ್ಧಮಾಡಿಕೊಳ್ಳುವುದು

ಲಸಿಕೆ ಎರಡು ಬಗೆಯ ಸೀಸೆಗಳಲ್ಲಿ ಬರುತ್ತದೆ.

1. ನಸುಗೆಂಪು ಬಣ್ಣದ ಲಸಿಕೆಯ ವಯಾಲ್
2. ಮುಚ್ಚಳವಿರುವ ಗಾಜಿನ ಸೀಸೆ ಮತ್ತು ಪ್ರತ್ಯೇಕ ಪ್ಲಾಸ್ಟಿಕ್ ಚೀಲದಲ್ಲಿ ಒಂದು ಹನಿಗೊಳವೆ

ಬಾಯಿಗೆ ಹಾಕುವ ಪೋಲಿಯೋ ಲಸಿಕೆ ತಯಾರು ಮಾಡಿಕೊಳ್ಳುವುದು

1ನೇ ಬಗೆಯ ಸೀಸೆ.

- ಲೋಹದ ಮಧ್ಯಭಾಗವನ್ನು ತೆಗೆಯಿರಿ.
- 0.5 ಮಿ. ಲೀ. ಲಸಿಕೆಯನ್ನು ಸಿರಿಂಜಿನಲ್ಲಿ ಎಳೆದುಕೊಳ್ಳಿ.
- ರಬ್ಬರಿನ ಮುಚ್ಚಳವನ್ನು ಎಂದಿಗೂ ತೆಗೆಯಬೇಡಿ.
- ಮೊದಲೇ ಸಿದ್ಧಪಡಿಸಿದ ಚಮಚದಲ್ಲಿ ಲಸಿಕೆಯನ್ನು ಹಾಕಬೇಡಿ.

2ನೇ ಬಗೆಯ ಸೀಸೆ

- ಲೋಹದ ಮುಚ್ಚಳವನ್ನು ತೆಗೆಯಿರಿ
- ರಬ್ಬರಿನ ಮುಚ್ಚಳವನ್ನು ತೆಗೆಯಿರಿ.
- ಹನಿಗೊಳವೆ ಇರುವ ಪ್ಲಾಸ್ಟಿಕ್ ಚೀಲವನ್ನು ಕತ್ತರಿಸಿ
- ಹನಿಗೊಳವೆಯನ್ನು ಸೀಸೆಗೆ ಕೊಡಿ.
- ಹನಿಗೊಳವೆ ಸೇರಿಸಿದ ಲಸಿಕೆಯ ಸೀಸೆಯನ್ನು ಮಂಜುಗಡ್ಡೆಯಿರುವ ಬಟ್ಟಲಿನಲ್ಲಿಡಿ.

ಬಾಯಿಗೆ ಹಾಕುವ ಪೋಲಿಯೊ ಲಸಿಕೆ ಕೊಡುವಿಕೆ

1. ತಾಯಿ ಮಗುವನ್ನು ಅವರ ಬೆನ್ನಡಿಯಾಗಿ ತನ್ನ ತೊಡೆಯ ಮೇಲೆ ಹಾಕಿಕೊಳ್ಳಲಿ.
2. ಮಗುವಿನ ಬಾಯಿಯನ್ನು ತೆರೆಯಿಸಿ

   ನಿಮ್ಮ ಕೈಯ ಬೆರಳುಗಳ ಮಧ್ಯ ಮಗುವಿನ ಗಲ್ಲಗಳನ್ನು ನಯವಾಗಿ ಒತ್ತಿ ಅವರ ತುಟಿ ಮುಂದೆ ಚಾಚುವಂತೆ ಮಾಡಿ.

   ಅಥವಾ ಮಗುವಿನ ಮೂಗನ್ನು ಮೆಲ್ಲಗೆ ಹಿಸುಕಿ.ತನ್ನ ಬಾಯಿಯನ್ನು ತೆಗೆಯುವುದು.
3. ಸಿರೇಂಜಿನಿಂದ (ಸೂಜಿ ಇಲ್ಲದೆ) 0.5 ಮಿ. ಲೀ. ಹಾಕಿ ಅಥವಾ ಒಂದು ಚಮಚದಿಂದ ಹಾಕಿ, ಅ ಥ ವಾ ಹನಿಗೊಳವೆಯ ಸೀಸೆಯಿಂದ ಲಸಿಕೆಯನ್ನು ನೇರವಾಗಿ ಹಾಕಬಹುದು.
4. ಮಗು ಲಸಿಕೆಯನ್ನು ನುಂಗುವುದನ್ನು ಖಚಿತಪಡಿಸಿಕೊಳ್ಳಿ. ಅದನ್ನು ಹೊರಕ್ಕೆ ಉಗುಳಿದರೆ ಇನ್ನೊಂದು ಸಲ ಕೊಡಿ.

## 4.8 ದಡಾರ ಮತ್ತು ಬಿಸಿಜಿ ಲಸಿಕೆ ಕೊಡಲು ಸಿದ್ಧತೆ

ದಡಾರ ಮತ್ತು ಬಿಸಿಜಿ ಲಸಿಕೆಗಳು ಹಿಮಗಟ್ಟಿ ಒಣಗಿಸದವು.

ಅದನ್ನು ಉಪಯೋಗಿಸುವ ಮುಂಚೆ ಜೊತೆಗಿರುವ ಕರಗಿಸುವ ದ್ರವವನ್ನು ಸೇರಿಸಬೇಕು.

ಪ್ರತಿಯೊಂದು ಲಸಿಕೆಯ ವಯಾಲ್ ಅಥವಾ ಆಂಪ್ಯೂಲ್ ಜೊತೆ ಕರಗಿಸುವ ದ್ರವದ ಒಂದು ಆಂಪ್ಯೂಲ್ ಸಹ ಇರುತ್ತದೆ.

ಕರಗಿಸುವ ದ್ರವವನ್ನು ಯಾವಾಗಲೂ ಲಸಿಕೆಯ ಜೊತೆಯಲ್ಲಿ.

- ಶೀತಕದ ಮುಖ್ಯ ಭಾಗದಲ್ಲಿಡಿ
- ತಣ್ಣನೆಯ ಪೆಟ್ಟಿಗೆ ಅಥವಾ ಲಸಿಕಾ ವಾಹಕದಲ್ಲಿಡಿ

ಅಂದರೆ ನೀವು ಉಪಯೋಗಿಸುವಾಗ ಅದು ಸಾಕಷ್ಟು ತಣ್ಣಗಿರುವುದು ಖಚಿತ. ಆದರೆ ದ್ರವವನ್ನು ಹಿಮಗಟ್ಟಿಸಬೇಡಿ ಏಕೆಂದರೆ ಸೀಸೆಗಳು ಒಡೆಯುತ್ತವೆ.



ಚಿತ್ರ 4.5 ದಡಾರದ ಲಸಿಕೆ ಮತ್ತು ಕರಗಿಸುವ ದ್ರವ

ಬಿಸಿಜಿ ಲಸಿಕೆ ಮತ್ತು ಕರಗಿಸುವ ದ್ರವ

**ಹಿಮಗಟ್ಟಿ ಒಣಗಿಸಿದ ಲಸಿಕೆಗಳನ್ನು ಪುನಃ ತಯಾರಿಸುವಿಕೆ**

ಕೆಲವು ಮಕ್ಕಳು ಸೇರುವವರೆಗೆ ಮತ್ತು ನೀವು ಲಸಿಕೆ ಕೊಡಲು ಸಿದ್ಧವಾಗುವವರೆಗೆ ತಾಳಿರಿ.

ಸಂಸ್ಕರಿಸದ 10 ಮಿ. ಲೀ. ಅಥವಾ 5 ಮಿ. ಲಿನ ಸಿರೆಂಜ ಮತ್ತು ಒಂದು ಸಂಸ್ಕರಿಸಿದ ಮಿಶ್ರಕ ಸೂಜಿಯನ್ನು ಆರಿಸಿಕೊಳ್ಳಿ

ಈ ದೊಡ್ಡ ಸಿರೆಂಜು ಮತ್ತು ಸೂಜಿಯನ್ನು ಕೇವಲ ಲಸಿಕೆ ಮತ್ತು ದ್ರವವನ್ನು ಸೇರಿಸಲು ಉಪಯೋಗಿಸುತ್ತೀರಿ. ಚುಚ್ಚುನ್ನ ಕೊಡಲಿಕ್ಕಲ್ಲ

ಕರಗಿಸುವ ದ್ರವದ ಅಂಪ್ಯೂಲ್‌ನ್ನು ತೆರೆಯಿರಿ



ಚಿತ್ರ 4.6 ಅಂಪ್ಯೂಲನ್ನು ತಟ್ಟುವಿಕೆ

ಸಿರೆಂಜಿನಲ್ಲಿ ಎಲ್ಲ ದ್ರವವನ್ನು ಎಳೆದುಕೊಳ್ಳಿ

ಲಸಿಕೆ ಸೀಸೆಯ ಪಟ್ಟಿಯನ್ನು ಪರೀಕ್ಷಿಸಿ ತೆರೆಯಿರಿ

ಬಿಸಿಜಿ ಲಸಿಕೆಗೆ

ನೀವು ಆಂಪ್ಯೂಲ್‌ನ್ನು ತೆಗೆಯುವ ಮುಂಚೆ

ಅವನ್ನು ಬೆರಳಿನಿಂದ ತಟ್ಟಿ ಲಸಿಕೆಯ ಎಲ್ಲ ಪುಡಿ ತಳದಲ್ಲಿ ಬೀಳುವಂತೆ ಮಾಡಿ.

ಹೀಗೆ ಮಾಡದಿದ್ದರೆ. ಆಂಪ್ಯೂಲ್‌ನ ಕೊರಳನ್ನು ಕೊಯಿದು ತೆಗೆಯುವಾಗ ಲಸಿಕೆ ಹೊರಗೆ ಬೀಳಬಹುದು.

ಮಿಶ್ರಕ ಸೂಜಿಯನ್ನು ಲಸಿಕೆಯ ಆಂಪ್ಯೂಲ್ ಅಥವಾ ವಯಾಲಿನಲ್ಲಿ ತೂರಿರಿ.

ಲಸಿಕೆಯ ಸೀಸೆಯಲ್ಲಿ ಎಲ್ಲ ದ್ರವವನ್ನೂ ಖಾಲಿಮಾಡಿ.

ಲಸಿಕೆ ಮತ್ತು ದ್ರವವನ್ನು ಸಿರೆಂಜಿನಲ್ಲಿ ನಿಧಾನವಾಗಿ ಎಳೆದುಕೊಂಡು ಮತ್ತೆ ನಿಧಾನವಾಗಿ ಆಂಪ್ಯೂಲ್ ಅಥವಾ ವಯಾಲಿನಲ್ಲಿ ತಳ್ಳಿ. ಹೀಗೆ ಕೆಲವು ಸಲ ಮಾಡಿ.

ಆಗ ಲಸಿಕೆ ಮತ್ತು ದ್ರವ ಚೆನ್ನಾಗಿ ಮಿಶ್ರವಾಗಿರುತ್ತವೆ ಮತ್ತು ಅದನ್ನು ಕಲಕುವ ಅವಶ್ಯಕತೆ ಇರುವುದಿಲ್ಲ.

ಪುನರ್ ತಯಾರಿಸಿದ ಲಸಿಕೆಯನ್ನು ಕೇವಲ ಒಂದೇ ಸಂದರ್ಭದಲ್ಲಿ ಉಪಯೋಗಿಸಿ.

## 4.9 ಬಿಸಿಜಿ ಲಸಿಕೆಯನ್ನು ಕೊಡುವಿಕೆ :– ವಿಶೇಷ ಉಪಕರಣ

ಬಿಸಿಜಿ ಲಸಿಕೆ ಕೊಡಲು ನೀವು ಬಹಳ ಕಡಿಮೆ ಪ್ರಮಾಣವನ್ನು ಅಳೆಯಬೇಕು ಮತ್ತು ಅದನ್ನು ಚರ್ಮದೊಳಕ್ಕೆ ಕೊಡಬೇಕು ಇದಕ್ಕಾಗಿ ನಿಮಗೆ ವಿಶೇಷ ಸಿರೆಂಜು ಮತ್ತು ಸೂಜಿಗಳು ಬೇಕಾಗುತ್ತವೆ. ಚರ್ಮದ ಕೆಳಗೆ ಚುಚ್ಚಿ ಕೊಡುವುದಿಲ್ಲವಾದ್ದರಿಂದ ಸೂಜಿಗಳನ್ನು ಪ್ರತಿಸಲವೂ ಕುದಿಸುವುದು ಬೇಕಾಗಿಲ್ಲ. ಸೂಜಿಯ ತುದಿಯನ್ನು ಬೆಂಕಿಗೆ ಹಿಡಿದು ಸಂಸ್ಕರಿಸಬಹುದು.

### ಬಿಸಿಜಿ ಉಪಕರಣ

ಒಂದು ಕಿರಿದಾದ 1 ಮಿ. ಲೀ. ಓಮೆಗೆ ಟ್ಯುಬರ್‌ಕ್ಯೂಲಿನ್ ಸಿರೆಂಜುಗಳು ಮತ್ತು ಚಿಕ್ಕ (10 ಮಿ. ಮಿ) ಸೂಕ್ಷ್ಮ (26 ಗೇಜ) ಸೂಜಿಗಳು ಮತ್ತು ಸೂಜಿಗಳನ್ನು ಕಾಯಿಸಿ ಸಂಸ್ಕರಿಸಲು ಒಂದು ಸ್ಪಿರಿಟ್ ದೀಪ ಮತ್ತು ಸ್ಪಿರಿಟ್ ದೀಪಕ್ಕೆ ಒಂದು ಕವಚ.



ಚಿತ್ರ 4.7 ಬಿಸಿಜಿ ಸೂಜಿ ಕಾಯಿಸುವ ಸ್ಪಿರಿಟ್ ದೀಪ ಮತ್ತು ಕವಚ




ಚಿತ್ರ. 4.8 ಓಮೆಗಾ-ಸಿರೆಂಜ್ ಮತ್ತು ಅಳತೆ

**ಓಮೆಗಾ ಸಿರೆಂಜ್ :**

ಇದು ಒಂದು ಸಂಕೀರ್ಣವಾದ ಗಾಜಿನ ಸಿರೆಂಜು. ಇದರಲ್ಲಿ ಎರಡು ಅಳತೆಗಳಿರುತ್ತವೆ. "0.20, 0.40, .60, .80 1.00ಮಿ, ಲಿ"ತೋರಿಸುವ ಅಳತೆಯನ್ನುಪಯೋಗಿಸಿ, ಒಂದು ವಿಬಾಗ ಅಥವಾ ಗುರುತು 0.01 ಮಿ.ಲಿ ನ ಸೂಚಕವಾದ್ದರಿಂದ 0.1ಮಿ.ಲಿ ಲಸಿಕೆ 10 ವಿಬಾಗಗಳನ್ನು ತುಂಬುತ್ತದೆ 4, 8, 12, 16 ರ ಅಂಕಿ ತೋರಿಸುವಅಳತೆಯನ್ನು, ಪಯೋಗಿಸಬೇಡಿ

**೪.10 ಬಿ ಸಿ ಜಿ ಕೊಡುವುದು:– ಚರ್ಮದಲ್ಲಿ ಕೊಡುವ ಚುಚ್ಚು :**

ಲಸಿಕೆಯನ್ನು ಪುನರ್‌ತಯಾರಿಸಿ, ಮಗುವನ್ನು ಸರಿಯಾಗಿ ಹಿಡಿದು, ಸಿರೆಂಜನ್ನು ತುಂಬಿರಿ,

**1. ಸೂಜಿಯನ್ನು ಬಿಸಿಮಾಡಿ;**

ಸೂಜಿಯನ್ನು ಸ್ಪಿರಿಟ್ ದೀಪದ ಉರಿಯಮೇಲೆ. ಅದು ಕೆಂಪಗಾಗುವವರೆಗೆ ಕೆಲವು ಸೆಕೆಂಡು ಹಿಡಿಯಿರಿ,

2. ಸ್ವಲ್ಪ(0.01–0.07 ಮಿ.ಲಿ) ಲಸಿಕೆಯನ್ನು

- ಸೂಜಿಯನ್ನು ತಣ್ಣಗೆ ಮಾಡಲು.
- ಶಾಖದಿಂದಹಾಳಾದ ಲಸಿಕೆಯನ್ನುಹೊರಹಾಕಲು
- ಸೂಜಿಯಲ್ಲಿ ಗಾಳಿಯಿಲ್ಲದಿರುವುದನ್ನು ಖಚಿತ ಪಡಿಸಿಕೊಳ್ಳಲು.



ಚಿತ್ರ. 4.9. ಬಿಸಿಜಿ ಸೂಜಿಯನ್ನು ಬಿಸಿ ಮಾಡುವುದು

– ಸೂಜಿಯಲ್ಲಿ ತಡೆಯಿಲ್ಲ ಎನ್ನುವುದನ್ನು ಖಚಿತ ಪಡಿಸಿಕೊಳ್ಳಲು.
ಸೂಜಿಯ ಮುಂಖಾಂತರ ಹೊರ ಹಾಕಿ.



ಚಿತ್ರ4.10 ಬಿಸಿಜಿ ಲಸಿಕೆ ಕೊಡುವುದು ಸರಿಯಾದ ಸ್ಥಿತಿ

3. ಮಗುವಿನ ಎಡಗೈಯನ್ನು ನಿಮ್ಮ ಎಡಗೈಯಲ್ಲಿ

ನಿಮ್ಮ ಕೈ ಮಗುವಿನ ತೋಳಿನ ಕೆಳಗೆ ಇರುವಂತೆ
ನಿಮ್ಮ ಹೆಬ್ಬೆರಳು ಮತ್ತು ಬೆರಳುಗಳು ತೋಳಿನ ಸುತ್ತ ಬಂದ ಚರ್ಮವನ್ನು (ಚಿತ್ರ 4.11) ಹಿಗ್ಗಿಸುವಂತೆ, ಹಿಡಿಯಿರಿ.

4. ಸಿರೇಂಜನ್ನು ನಿಮ್ಮ ಬಲಗೈಯಲ್ಲಿ ಸೂಜಿಯ ತುದಿ ಮತ್ತು ಅಳತೆ ಪಟ್ಟಿ ನಿಮ್ಮ ಕಡೆ ತೋರುವಂತೆ ಹಿಡಿಯಿರಿ.
5. ಸಿರೇಂಜನ್ನು ಮತ್ತು ಸೂಜಿಯನ್ನು ಮಗುವಿನ ಹಿಂಗೈ ತೋಳ ಗುಂಟ ಇಡಿ.
6. ಸೂಜಿಯ ತುದಿಯನ್ನು ಚರ್ಮದಲ್ಲಿ ತೂರಿ ಕೇವಲ ತುದಿ ಮತ್ತು ಸ್ವಲ್ಪ ಹೆಚ್ಚು ತೂರಿದರೆ ಸಾಕು.

ಸೂಜಿಯನ್ನು ಕೇವಲ ಚರ್ಮದ ಮೇಲೆ ಪದರಗಳಲ್ಲಿ ಹೋಗುವಂತೆ ಚರ್ಮದ ಸಮತಲದಲ್ಲಿಟ್ಟು ತುದಿ ಮೇಲಿರುವಂತೆ ಇಡಿ. ಸೂಜಿಯನ್ನು ಬಹಳ ದೂರ ತೂರಬೇಡಿ ಮತ್ತು ಕೆಳಗಡೆಗೂ ತೂರಬೇಡಿ ಇಲ್ಲವಾದರೆ ಅದು ಚರ್ಮದ ಕೆಳಗಡೆ ಹೋಗಿಬಿಡುತ್ತದೆ, ಆಗ ಅದು ಚರ್ಮದ ಒಳಗಿನ ಬದಲು ಚರ್ಮದ ಕೆಳಗಿನ ಚುಚ್ಚುಗುತ್ತದೆ.

7. ಸರಿಯಾದ ಸ್ಥಿತಿಯಲ್ಲಿ ಹಿಡಿಯಲು ಈಗ ನಿಮ್ಮ ಎಡ ಹೆಬ್ಬೆರಳನ್ನು ಸಿರೆಂಜಿನ ಸೂಜಿಯ ತುದಿಯ ಮೇಲಿಡಿ ಚಿತ್ರ (3.14)

ಸಿರೆಂಜಿನ ಮುಳುಗುಣಿಕೆಯ ತುದಿಯನ್ನು ನಿಮ್ಮ ಬಲಗೈ ತೋರು ಬೆರಳ ಮತ್ತು ಮದ್ಯದ ಬೆರಳಿನಲ್ಲಿ ಹಿಡಿದು ಮುಳುಗುಣಿಕೆಯನ್ನು ನಿಮ್ಮ ಬಲ ಹೆಬ್ಬೆರಳಿನಿಂದ ಒತ್ತಿ.



ಚಿತ್ರ 4.11 ಬಿಸಿಜಿ ಲಸಿಕೆ ಕೊಡುವಿಕೆ(ಚುಚ್ಚುವುದು )

8. 0. 1. ಮಿ. ಲೀ. ಲಸಿಕೆಯನ್ನು ಒಳ ಚುಚ್ಚಿ ಸೂಜಿಯನ್ನು ಹಿಂದಕ್ಕೆಳೆಯಿರಿ
ಸಿರೆಂಜಿನ ಹೊಂದಣಿಕೆಯ ಸುತ್ತಲೂ ಲಸಿಕೆಯು ಸೋರದಂತೆ ಖಚಿತಪಡಿಸಿಕೊಳ್ಳಿ. ಸೋರುತ್ತಿದ್ದರೆ ಸೂಜಿಯನ್ನು ಭದ್ರವಾಗಿ ಕೂಡಿಸಬೇಕು.

**ನೀವು ಬಿಸಿಜಿ ಯನ್ನು ಸರಿಯಾಗಿ ಚರ್ಮದಲ್ಲಿ ತಳ್ಳಿದ್ದರೆ :**

ಚರ್ಮದಲ್ಲಿ ಸಮತಲದ ಮೇಲ್ಭಾಗ ಇರುವ ಒಂದು ಬಾವು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ.
ಈ ಊದಿದ ಚರ್ಮ ಬಿಳುಚಿಕೊಂಡು ಚಿಕ್ಕ ಕುಳಿಗಳನ್ನು ಹೊಂದಿರುತ್ತದೆ.

**ನೀವು ಬಿಸಿಜಿಯನ್ನು ತಪ್ಪಿ ಚರ್ಮದ ಕೆಳಗೆ ತಳ್ಳಿದರೆ**

ಚರ್ಮ ಊದುವುದಿಲ್ಲ ಅಥವಾ ಚರ್ಮದ ಕೆಳಗೆ ಸಣ್ಣ ದಿಮ್ಮ ಕಾಣುತ್ತದೆ.
ಲಸಿಕೆ ಸುಲಭವಾಗಿ ಒಳ ಸೇರುವ ಅನುಭವವಾಗುತ್ತದೆ. ಚರ್ಮದ ಒಳಗೆ ಚುಚ್ಚುವುದು ಕೊಡಲು ಮುಳಗುಣಿಕೆಯನ್ನು ಗಟ್ಟಿಯಾಗಿ ಒತ್ತಬೇಕಾಗುತ್ತದೆ.

**ಇಂತಹ ಪರಿಸ್ಥಿತಿಯಲ್ಲಿ ಏನು ಮಾಡುವುದು**

- ಚುಚ್ಚುವುದನ್ನು ನಿಲ್ಲಿಸಿ, ಸೂಜಿಯ ಸ್ಥಾನವನ್ನು ಸರಿಪಡಿಸಿ.
- ಉಳಿದ ಲಸಿಕೆಯನ್ನು ಕೊಡಿ. ಹೆಚ್ಚಿಗೆ ಕೊಡಬೇಡಿ.
- ಈಗಾಗಲೇ ಪೂರ್ತಿ ಲಸಿಕೆ ಚರ್ಮದ ಕೆಳಗೆ ಸೇರಿದರೆ ಮಗುವಿಗೆ ಚುಚ್ಚುಮದ್ದು ಕೊಟ್ಟಂತೆ ಪರಿಗಣಿಸಿ
- ಮತ್ತೊಮ್ಮೆ ಚುಚ್ಚುಮದ್ದು ಕೊಡಬೇಡಿ.
- ಮಗುವಿಗೆ ಲಸಿಕಾ ಗ್ರಂಥಿಗಳು ದೊಡ್ಡವಾಗಬಹುದು ಅಥವಾ ಕೀವಾಗಬಹುದು, ಆದ್ದರಿಂದ ಮಗುವನ್ನು ಜಾಗ್ರತೆಯಿಂದ ಗಮನಿಸುತ್ತಿರಿ.

**4.11 ಬಿಸಿಜಿ ಲಸಿಕೆ ಕೊಡುವಿಕೆ : ಮುಂದಿನ ಮಗುವಿಗೆ ಚುಚ್ಚುಹಾಕಲು ತಯಾರಾಗುವುದು**

**ಒಮ್ಮೆಗಾ ಸಿರೆಂಜನ್ನುಪಯೋಗಿಸುವುದು**

- ಸೂಜಿಯನ್ನು ಕಾಯಿಸಿ
- ಸೂಜಿ ತಣ್ಣಗಾಗಲು ಮತ್ತು ಸರಿಯಾಗಿ ಗೊಳ್ಳಲು ಲಸಿಕೆಯ ಕೆಲವು ಹನಿಗಳನ್ನು ಹೊರಹಾಕಿ.
- ಇನ್ನೊಂದು ಮಗು ಬರುವವರೆಗೆ ಸಿರೆಂಜನ್ನು ಕಪ್ಪುಕಾಗದದಿಂದ ಮುಚ್ಚಿಡಿ.
- ಚುಚ್ಚುಮದ್ದು ಕೊಟ್ಟು ಸೂಜಿಯನ್ನು ಮತ್ತೆ ಕಾಯಿಸಿ.
- ಪ್ರತಿಯೊಂದು ಚುಚ್ಚುಮದ್ದಿನ ಮಧ್ಯೆ ಸೂಜಿಯ ತುದಿಯನ್ನು ಕಾಯಿಸುತ್ತಿರಿ.
- ಸಿರೆಂಜು ಖಾಲಿ ಆದಾಗ ಹೊಂದಣಿಕೆಯು ಸೇರದಂತೆ ಇದೇ ಸೂಜಿಯನ್ನು ಕಾಯಿಸಿ
- ಸೂಜಿ ಆರಿದ ಮೇಲೆ, ಸಿರೆಂಜಿನಲ್ಲಿ ಮತ್ತೆ 5 ಡೋಸ್‌ಗಳಷ್ಟು ಲಸಿಕೆ ತುಂಬಿಕೊಳ್ಳಿ.

| |
|---|
| **ಬಿಸಿಜಿ ಗಾಗಿ ನೆನಪಿಡಿ** |
| ಚರ್ಮದ ಒಳಗೆ ಸೇರಿಸಿ ಚರ್ಮದ ಕೆಳಗಲ್ಲ, |
| ಚುಚ್ಚುಮದ್ದುಗಳ ನಡುವೆ ಸೂಜಿಯನ್ನು ಕಾಯಿಸಿ |
| ಸಿರೆಂಜನ್ನು ಕಪ್ಪುಕಾಗದದಿಂದ ಮುಚ್ಚಿಡಿ |

**4·12 ದಡಾರದ ಲಸಿಕೆ ಕೊಡುವುದು : ಚರ್ಮದ ಕೆಳಗೆ ಚುಚ್ಚುವುದು**

- ಲಸಿಕೆಯನ್ನು ಪುನರ್ ತಯಾರಿಸಿ ಮಗುವನ್ನು ಸರಿಯಾಗಿ ಹಿಡಿಸಿ ಸಿರೆಂಜನ್ನು ತುಂಬಿರಿ.
- ಮಗುವಿನ ಮೇಲ್ತೋಳಿನ ಹೊರಭಾಗದಲ್ಲಿ ಚುಚ್ಚುಮದ್ದು ಕೊಡಿ.
- ನಿಮ್ಮ ಬೆರಳುಗಳು ಚರ್ಮವನ್ನು ಚೂಟಿ ಹಿಡಿಯಲಿ
- ಸೂಜಿಯನ್ನು ಚೂಟಿ ಹಿಡಿದ ಚರ್ಮದಲ್ಲಿ ಸೇರಿಸಿ ನೇರವಾಗಿ ಅಲ್ಲ, ಸ್ವಲ್ಪ ಒರೆಯಾಗಿ
- ಸೂಜಿಯನ್ನು ಬಹಳ ಆಳಕ್ಕೆ ತಳ್ಳಬೇಡಿ
- ಸೂಜಿಯನ್ನು ಒಳ ಸೇರಿಸುವಾಗ ಅದನ್ನು ನಿಯಂತ್ರಿಸಲು ಸಿರೆಂಜಿನ ಹೊಂದಣಿಕೆಯ ತುದಿಗೆ ನಿಮ್ಮ ಹೆಬ್ಬೆರಳು ಮತ್ತು ಬೆರಳಿನಿಂದ ಆಧಾರ ಕೊಡಿ.



ಅ) ಸೂಜಿಯನ್ನು ಚುಚ್ಚುವುದು



ಬ) ಲಸಿಕೆಯನ್ನು ಒಳಸೇರಿಸುವುದು

ಚಿತ್ರ 4.12 ದಡಾರದ ಲಸಿಕೆ ಕೊಡುವುದು

ಮುಳುಗುಣಿಯನ್ನು ಹಿಂದಕ್ಕೆ ಎಳೆದು ರಕ್ತವನ್ನು ಪರೀಕ್ಷಿಸಿ

ಸೂಜಿ ನಿಮ್ಮ ರಕ್ತ ನಾಳಕ್ಕೆ ಹೋಗಿದ್ದರೆ ಸಿರೇಂಜಿನಲ್ಲಿ ರಕ್ತಬರುವುದು ಆಗ ಸೂಜಿಯನ್ನು ಹೊರಗೆಳೆದು ಬೇರೆ ಕಡೆ ಇಡಿ.

ಮುಳುಗುಣಿಯನ್ನು ಹೆಬ್ಬೆರಳಿನಿಂದ ತಳ್ಳಿ ಲಸಿಕೆಯನ್ನು ಸೇರಿಸಿ.

ಸೂಜಿಯನ್ನು ಹೊರಗೆಳೆಯಿರಿ.

## ರಾಷ್ಟ್ರೀಯ ಲಸಿಕೆ ನೀಡುವ ವೇಳಾಪಟ್ಟಿ

| ಯಾರಿಗೆ | ಲಸಿಕೆ | ಸಂಖ್ಯೆ | ಮಾರ್ಗ |
|---|---|---|---|
| ಗರ್ಭಿಣಿಯರು | ಟಿಟಿ | 1 * | ಸ್ನಾಯುಗಳಲ್ಲಿ |
| ಶಿಶುಗಳು (3-9 ತಿಂಗಳು) | ಡಿ ಪಿ ಟಿ | 3+1 * * | ಬಾಯಿಯಲ್ಲಿ |
| | ಪೋಲಿಯೋ | 3+1 * * | ಬಾಯಿಗಳಲ್ಲಿ |
| | ಬಿಸಿಜಿ | 1 | ಚರ್ಮದಲ್ಲಿ |
| (9-12 ತಿಂಗಳು) | ದಡಾರ | 1 | ಚರ್ಮದ ಕೆಳಗೆ |
| ಮಕ್ಕಳು | ಡಿಟಿ | 1 * | ಸ್ನಾಯುಗಳಲ್ಲಿ |
| | ಟೈಫಾಯಿಡ್ | 2 | ಚರ್ಮದ ಕೆಳಗೆ |
| ಶಾಲಾ ಮಕ್ಕಳು (10 ಮತ್ತು 16 ವರ್ಷ) | ಟಿಟಿ | 1 * | ಸ್ನಾಯುಗಳಲ್ಲಿ |

* ಮುಂಚೆ ಲಸಿಕೆ ಕೊಟ್ಟಿರದಿದ್ದರೆ ಎರಡು ಸಲ ಕೊಡಿ.

** ವರ್ಧಕ ಪ್ರಮಾಣ 18 ರಿಂದ 24 ತಿಂಗಳ ವಯಸ್ಸಿನಲ್ಲಿ

— ಎರಡು ಡೋಸ್‌ಗಳ ಮಧ್ಯದ ಅಂತರ ಒಂದು ತಿಂಗಳಿಗೆ ಕಡಿಮೆ ಇರಕೂಡದು.

— ಸೌಮ್ಯ ಸೋಂಕುಗಳು ಲಸಿಕೆ ಕೊಡಲು ಬಾಧಕ ಸೂಚನೆಯಲ್ಲ

— ಎಲ್ಲ ಲಸಿಕೆಗಳ ಪ್ರಮಾಣ 0.5 ಮಿ. ಲೀ. ಆದರೆ ಬಿಸಿಜಿ ಮಾತ್ರ 0.1 ಮಿ. ಲೀ.

— ಲಸಿಕೆ ಕೊಡುವ ಮುಂಚೆ ಕೈ ತೊಳೆಯಿರಿ ಮತ್ತು ಲಸಿಕೆ ನೀಡುವ ಸ್ಥಳವನ್ನು ಸ್ವಚ್ಛವಾಗಿಡಿ.

— ಒಂದು ಸಲಕ್ಕೆ ಒಂದ ಲಸಿಕೆಯ ಒಂದೇ ಸೀಸೆಯನ್ನು ತೆಗೆಯಿರಿ. ತೆರೆದ ವಯಾಲನ್ನು ಬಳಸುವಾಗ ಮಂಜಿನ ಒತ್ತೆಯ ಮೇಲೆ ಅಥವಾ ಮಂಜುಗಡ್ಡೆಗಳಿರುವ ಬಟ್ಟಲಿನಲ್ಲಿಡಿ. ವಯಾಲ್‌ಗಳ ಮೇಲೆ ಶಾಖ ಅಥವಾ ಸೂರ್ಯನಬೆಳಕು ಬೀಳದಂತೆ ಗಮನವಹಿಸಿ. ಉಪಯೋಗ ಮಾಡದ ವಯಾಲ್‌ಗಳನ್ನು ಶೀತಕಾಪಕ ಅಥವಾ ಶೀತಕದಿಂದ ಹೊರತೆಗೆಯಬೇಡಿ.

— ಲಸಿಕೆಯ ಕೊನೆಯದಿನವನ್ನು ಪರೀಕ್ಷಿಸಿ.

# 5. ಲಸಿಕೆ ನೀಡುವ ವಿಧಾನಗಳು

ಲಭ್ಯವಿರುವ ಸೌಲಭ್ಯಗಳು ಮತ್ತು ಅನುಕೂಲಕ್ಕನುಗುಣವಾಗಿ ಮಕ್ಕಳು ಮತ್ತು ಗರ್ಭಿಣಿಯರಿಗೆ ಲಸಿಕೆ ನೀಡಲು ವಿವಿಧ ವಿಧಾನಗಳನ್ನು ಅಳವಡಿಸಿಕೊಳ್ಳಲಾಗುತ್ತದೆ. ನಿರ್ಧರಿತ ಕೇಂದ್ರ ವಿಧಾನ ಹೊರ ಭೇಟಿ ವಿಧಾನ ಮತ್ತು ಶಿಬಿರಗಳು. ಲಸಿಕೆ ನೀಡುವ ಸೇವೆಗಳು ಒಮ್ಮೆ ಮಾಡಿಬಿಡುವಂತಹವುಗಳಲ್ಲ. ಆದ್ದರಿಂದ ಅವುಗಳನ್ನು ಮುಂದಿನ ವರ್ಷಗಳಲ್ಲಿ ಮರುಕಳಿಸಲು ಸಾಧ್ಯವಾಗುವಂತೆ ಯೋಜಿಸಲಾಗುತ್ತದೆ. ಒಮ್ಮೆ ಪ್ರಾರಂಭಿಸಿದ ಸೇವೆಗಳನ್ನು ಹಿಂತಗೆದುಕೊಳ್ಳಲಾಗುವುದಿಲ್ಲ.

## 5.1 ನಿರ್ಧರಿತ ಕೇಂದ್ರಗಳು

ಆರೋಗ್ಯಸೇವೆಗಳನ್ನೊದಗಿಸುವ ಮತ್ತು ಸಾಕಷ್ಟು ಶೀತಲ ದಾಸ್ತಾನು ವ್ಯವಸ್ಥೆಗಳಿರುವ ಅಂದರೆ ವಿಶ್ವಾಸಾರ್ಹದ ವಿದ್ಯುತ್ ಸರಬರಾಜು ಮತ್ತು ಕಾರ್ಯಶೀಲ ಶೀತಕವಿರುವ ಸಂಸ್ಥೆಗಳನ್ನು ಗುರುತಿಸಬೇಕು. ಈಗಾಗಲೇ ಲಸಿಕೆ ನೀಡುವ ಸೇವೆಗಳಿರದಿದ್ದರೆ, ಅವುಗಳ ಸಾಧ್ಯತೆಯನ್ನು ಗಣನೆಯಲ್ಲಿ ತೆಗೆದುಕೊಳ್ಳಬೇಕು. ಎಲ್ಲ ಲಸಿಕೆಗಳೂ ಪ್ರತಿಯೊಂದು ಕೇಂದ್ರದಲ್ಲಿ ಲಭ್ಯವಿರಬೇಕು, ಇದರಿಂದ ಮಕ್ಕಳು ವಿವಿಧ ಲಸಿಕೆಗಳಿಗೆ ಬೇರೆ ಬೇರೆ ಸ್ಥಳಗಳಿಗೆ ಹೋಗಬೇಕಾಗುವುದಿಲ್ಲ. ಸಂಸ್ಥೆಗೆ ಬರುವವರ ಸಂಖ್ಯೆಗನುಗುಣವಾಗಿ ಪ್ರತಿ ದಿನ, ವಾರಕ್ಕೆರಡುಸಲ, ಪ್ರತಿವಾರ, ತಿಂಗಳಿಗೆ ಎರಡು ಅಥವಾ ಒಂದು ಸಲ ಹೀಗೆ ಲಸಿಕೆ ನೀಡುವಿಕೆಯ ವ್ಯವಸ್ಥೆ ಮಾಡಬೇಕು. ಲಸಿಕೆ ನೀಡುವ ದಿವಸ ಮತ್ತು ಸಮಯವನ್ನು ಎಲ್ಲರಿಗೂ ತಿಳಿಯುವಂತೆ ಬರೆದಿಡಬೇಕಲ್ಲದೆ, ಲಸಿಕೆ ನೀಡುವ ಕಾರ್ಯವನ್ನು ವೇಳಾ ಪಟ್ಟಿಯ ಪ್ರಕಾರ ನಡೆಸಲು ಎಲ್ಲ ಪ್ರಯತ್ನಗಳನ್ನು ಮಾಡಬೇಕು.

## 5.2 ದೂರದ ಸ್ಥಳಸೇರುವ ವಿಧಾನ

ಲಸಿಕೆಗಳನ್ನು ಸಂಸ್ಥೆಗಳಿಗಿಂತ 5ಕಿ.ಮೀ. ದೂರವಿರುವ ಗ್ರಾಮಗಳಿಗೆ ತೆಗೆದುಕೊಂಡು ಹೋಗಿ ಕೊಡಬಹುದು. ಇಂತಹ ಕ್ರಮಗಳು ವಿಶೇಷವಾಗಿ ಸಾರಿಗೆ ಮತ್ತು ಸಂಪರ್ಕಗಳ ಕೊರತೆ ಇರುವ ಸ್ಥಳಗಳಿಗೆ ಅವಶ್ಯಕ.

### 5.2.1. ದೂರದ ಸ್ಥಳದಲ್ಲಿ ಸೇವಾಕ್ರಮ ಪ್ರಾರಂಭಿಸುವಿಕೆ :

ಸಂಬಂಧಪಟ್ಟ ಜನಸಮುದಾಯವನ್ನು ಭೇಟಿಮಾಡಿ ಮುಖಂಡರನ್ನು ಮಾತಾಡಿಸಿ. ನಿಮ್ಮ ಕಾರ್ಯಕ್ರಮದ ಬಗ್ಗೆ ವಿವರಿಸಿ. ಅಲ್ಲಿಯ ಸಮುದಾಯದ ಆರೋಗ್ಯ ಸ್ವಯಂಸೇವಕ (ಸಮುದಾಯ ಆರೋಗ್ಯಮಾರ್ಗದರ್ಶಕ) ತರಬೇತಿ ಹೊಂದಿದ ಸ್ಥಳೀಯ ದಾದಿಯರು ಪಾಲ್ಗೊಳ್ಳುವುದು ಅವಶ್ಯಕ. ಲಸಿಕೆ ನೀಡಲು ಪರಸ್ಪರ ಅನುಕೂಲವಾಗುವ ದಿನವನ್ನು ನಿರ್ಧರಿಸಿ.

ಅಲ್ಲಿಯ ಜನರಿಗೆ ಓರ್ವ ಸಂಪರ್ಕವ್ಯಕ್ತಿಯನ್ನು ಗುರುತಿಸಲು ತಿಳಿಸಿ. ಈ ಸಂಪರ್ಕ ವ್ಯಕ್ತಿ ನೀವು ಬರುವ ದಿನವನ್ನು ತಿಳಿದು ತಾಯಂದಿರಿಗೆ ತಿಳಿಸುವರಲ್ಲದೆ. ನಿಮಗೆ ಜನರ ಸಹಕಾರವನ್ನು ಒದಗಿಸಿಕೊಡುತ್ತಾರೆ
ಲಸಿಕೆ ನೀಡುವ ಸ್ಥಳದ ಬಗ್ಗೆಯೋಜಿಸಿ. ಅವಶ್ಯಕ ಕುರ್ಚಿ. ಮೇಜು. ಸ್ಟೋವ್‌ಮತ್ತುನೀರು ದೊರೆಯುವ ಸ್ಥಳಗಳನ್ನು ಗೊತ್ತು ಮಾಡಿ ಕೊಳ್ಳಿ.

ಸ್ಥಳದ ಜನ ಏನು ಮಾಡಬೇಕೆನ್ನುವುದನ್ನು ನಿಮ್ಮ ಸಂಪರ್ಕ ವ್ಯಕ್ತಿಗೆ ಸ್ಪಷ್ಟವಾಗಿ ತಿಳಿಸಿ
ಲಸಿಕೆ ನೀಡಲು ದೂರದ ಸ್ಥಳಕ್ಕೆ ತೆಗೆದುಕೊಂಡು ಹೋಗಬೇಕಾದ ವಸ್ತುಗಳ ಒಂದು ಪಟ್ಟಿಯನ್ನು ತಯಾರಿಸಿ,

### 5.2.2. ಲಸಿಕೆ ನೀಡಲು ಗ್ರಾಮಕ್ಕೆ ಬರುವುದು

ಮೊದಲು ಏನು ಮಾಡಬೇಕು ?
ಲಸಿಕಾವಾಹಕವನ್ನು ಮನೆಯೊಂದರ ಅಥವಾ ಮರದ ಕೆಳಗಿನ ನೆರಳಲ್ಲಿಡಿ.

ನಿಮ್ಮ ಸಂಪರ್ಕವ್ಯಕ್ತಿಗೆ ನೀವು ಬಂದಿರುವ ಬಗ್ಗೆ ಜನರಿಗೆ ತಿಳಿಸಲು ಹೇಳಿ.

ಲಸಿಕೆ ನೀಡಿಕೆ ತಂಡದ ಒಬ್ಬವ್ಯಕ್ತಿ ಆರೋಗ್ಯ ಶಿಕ್ಷಣ ಪ್ರಾರಂಭಿಸಬೇಕು.

ತಂಡದ ಇತರರು ಸ್ಥಳೀಯ ಜನರ ಸಹಾಯದಿಂದ ಲಸಿಕೆ ನೀಡುವ ಸ್ಥಳ ತಯಾರು ಮಾಡಬೇಕು :

ಸಂಪರ್ಕ ವ್ಯಕ್ತಿಯು ತಂಡ ಬರುವುದಕ್ಕೆ ಮುಂಚೆಯೇ ಲಸಿಕೆ ನೀಡುವ ಸ್ಥಳ ಮತ್ತು ಜನರನ್ನು ಸಿದ್ಧಗೊಳಿಸಿಟ್ಟಿದ್ದರೆ ಒಳ್ಳೆಯದು

ನಂತರದ ಭೇಟಿಗಳು :

ಮೂರು ಭೇಟಿಗಳ ವ್ಯವಸ್ಥೆಮಾಡಿ. ಭೇಟಿಗಳ ಮಧ್ಯ 4-8 ವಾರಗಳ ಅಂತರವಿರುವುದು ಸೂಕ್ತ. ಒಂದು ತಿಂಗಳಿಗಿಂತ ಕಡಿಮೆ ಅಂತರ ಇರಬಾರದು.

ನಿಶ್ಚಿತ ದಿನದಂದೇ ಲಸಿಕ ನೀಡುವ ಸೇವೆಯನ್ನು ಒದಗಿಸಲು ಸರ್ವ ಪ್ರಯತ್ನ ಮಾಡಬೇಕು. ಕಾರಣಾಂತರಗಳಿಂದ ಇದು ಸಾಧ್ಯವಾಗದಿದ್ದರೆ ನಿರ್ಧರಿಸಿದ ಮುಂದಿನ ದಿವಸ ಮತ್ತು ಸಮಯದ ಬಗ್ಗೆ ಗ್ರಾಮಸ್ಥರಿಗೆ ತಿಳಿಸಬೇಕು.

## 5.2.3. ಆರೋಗ್ಯ ಕೇಂದ್ರಕ್ಕೆ ಮರಳಿದನಂತರ :

ಲಸಿಕಾವಾಹಕದಲ್ಲಿ ಮಂಜುಗಡ್ಡೆ ಇರುವುದನ್ನು ಪರೀಕ್ಷಿಸಿ ನೋಡಿಕೊಳ್ಳಿ.

ಲಸಿಕಾವಾಹಕದಲ್ಲಿ. ಮಂಜುಗಡ್ಡೆ ಇನ್ನೂ ಇದ್ದರೆ. ಲಸಿಕೆಗಳು ಒಳ್ಳೆಯ ಸ್ಥಿತಿಯಲ್ಲಿರುತ್ತವೆ.

ಅಂತಹ ಲಸಿಕೆಯ ಸೀಸೆಗಳನ್ನು ಹಿಂತಿರುಗಿಸಿದ ಪಟ್ಟಿ ಇರುವ ಡಬ್ಬದಲ್ಲಿಟ್ಟು ಶೀತಕದಲ್ಲಿಡಿ. ಮುಂದಿನ ಸಲ ಈ ಲಸಿಕೆಗಳನ್ನು ಮೊದಲು ಉಪಯೋಗಿಸಿ.

ಲಸಿಕೆಗಳನ್ನು ಶೀತಕದಿಂದ ಮೂರಕಿಂತ ಹೆಚ್ಚು ಸಲ ಹೊರತೆಗೆಯದಂತೆ ಎಚ್ಚರವಹಿಸಿ.

ನಿಮ್ಮ ಮುಂದಿನ ಲಸಿಕೆ ನೀಡುವ ಕ್ರಮಕ್ಕೆ. ಹಿಮಗಟ್ಟಿಸುವ ಭಾಗದಲ್ಲಿ ಸಾಕಷ್ಟು ಮಂಜಿನ ಒತ್ತೆಗಳು ಮತ್ತು ಮಂಜಿನಗಡ್ಡೆಗಳಿರುವುದನ್ನು ಪರೀಕ್ಷಿಸಿ.

ನೀರುಹೊರಹೋಗುವ ಮುಂಚೆ. ಹೆಚ್ಚಿನಮಂಜಿನ ಒತ್ತೆಗಳನ್ನು ಹಿಮಗಟ್ಟಿಸುವ ಭಾಗದಲ್ಲಿಟ್ಟಿದ್ದರೆ. ಹಿಂತಿರುಗಿಸಿದ ಮಂಜಿನ ಒತ್ತೆಗಳನ್ನು ಶೀತಕದ ಕೆಳಭಾಗದಲ್ಲಿಡಿ

ಲಸಿಕಾವಾಹಕವನ್ನು ಸ್ವಚ್ಛವಮಾಡಿ. ಒಣಗಲುಬಾಯಿ ತೆರೆದಿಡಿ. ಅದರಲ್ಲಿ ಬಿರುಕುಗಳಿಲ್ಲದಿರುವುದನ್ನು ಪರೀಕ್ಷಿಸಿರಿ ಬಿರುಕುಗಳಿದ್ದರೆ ಟೇಪಿನಿಂದ ದುರಸ್ತಿ ಮಾಡಿ.

ಸಿರಿಂಜು, ಚಿಮ್ಮಟಿಗೆ ಪಾತ್ರೆ ಇತ್ಯಾದಿ ಪದಾರ್ಥಗಳನ್ನು ಸ್ಥಳದಲ್ಲಿ ಸ್ವಚ್ಛ ಮಾಡಲಾಗಿರದಿದ್ದರೆ. ಈಗ ಮಾಡಿ. ಸಮಯವಿದ್ದರೆ ಸಂಸ್ಕರಣೆಯನ್ನು ಮಾಡಿ.

## 5.3 ಶಿಬಿರಗಳು

ಶಿಬಿರಗಳನ್ನು ನಿರ್ಧರಿತ ಕೇಂದ್ರಗಳಿಂದ ಅಥವಾ ದೂರದ ಸ್ಥಳಗಳಿಗೆ ಹೋಗುವ ವಿಧಾನದಿಂದ. ಸೇವೆ ಸಲ್ಲಿಸಲಾಗದ ಸ್ಥಳಗಳಲ್ಲಿ ಚಳಿಗಾಲದಲ್ಲಿ ವ್ಯವಸ್ಥೆ ಮಾಡಬೇಕು, ಆರೋಗ್ಯ ಕಾರ್ಯಕರ್ತರ ತಂಡಗಳು, ಸಾಕಷ್ಟು ಲಸಿಕೆ ಮತ್ತು ಇತರ ಉಪಕರಣಗಳೊಂದಿಗೆ ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತವೆ. ಈ ವಿಧಾನದಿಂದಲೂ ದೂರ ಹೋಗುವ ವಿಧಾನದಲ್ಲಿ ಮಾಡಿದಹಾಗೆ ಮುಂಚಿತವಾಗಿಯೇ ಪೂರ್ವಕಾರ್ಯಗಳನ್ನು ಮಾಡಿದರೆ ಮಾತ್ರ ಯಶಸ್ಸು ಸಾಧ್ಯ. ಕಡಮೆ ಸಮಯದಲ್ಲಿ ಬಹಳ ಗ್ರಾಮಗಳನ್ನು ಮುಟ್ಟುವುದಲ್ಲದೆ ಈ ಗ್ರಾಮಗಳು ಆರೋಗ್ಯ ಕೇಂದ್ರದಿಂದ ದೂರವಿರುವುದರಿಂದ ಗ್ರಾಮಗಳ ವೇಳಾಪಟ್ಟಿ ಮತ್ತು ಸಾರಿಗೆಯ ಮಾರ್ಗಗಳನ್ನು ಮುಂಚಿತವಾಗಿಯೇ ನಿರ್ಧರಿಸಬೇಕು. ಸಮುದಾಯದ ಸಕ್ರಿಯ ಭಾಗವಹಿಸುವಿಕೆ ಈ ಕೆಲಸಕ್ಕೆ ಬಹಳ ಅನುಕೂಲ ಗ್ರಾಮೀಣ ಮುಖಂಡರು, ಅರ್ಹ ಮಕ್ಕಳ ಪಟ್ಟಿಯನ್ನಿಟ್ಟುಕೊಂಡು ಅವರನ್ನು ನಿರ್ಧರಿತ ಸ್ಥಳಕ್ಕೆ ಸರಿಯಾದ ದಿನ ಮತ್ತು ಸಮಯಕ್ಕೆ ಕರೆತರುವಂತೆ ಪ್ರೋತ್ಸಾಹಿಸಬೇಕು. ನಾಲ್ಕು-ಎಂಟು ವಾರಗಳ ಅಂತರದಲ್ಲಿ ಮರು ಭೇಟಿ ವ್ಯವಸ್ಥೆಮಾಡಿ,

# 6. ಸಮುದಾಯದ ಬೆಂಬಲ ಮತ್ತು ಬೇಡಿಕೆಯ ನಿರ್ಮಾಣ

## 6.1 ಸಮುದಾಯದ ಮನವೊಲಿಸುವುದು

### ಸಹಕಾರದ ಅವಶ್ಯಕತೆ

* ನಿಮ್ಮ ಲಸಿಕೆ ನೀಡುವ ಕಾರ್ಯಕ್ರಮ ಯಶಸ್ವಿಯಾಗಬೇಕಾದರೆ ಜನರ ಸಹಕಾರ ಅವಶ್ಯಕ. ಅದು ನಿಮ್ಮ ಕೆಲಸವನ್ನು ಸಹಾಯಕವಾಗಿಸುತ್ತದೆ ಮತ್ತು ಆಸಕ್ತಿಯುತವಾಗಿ ಮಾಡುತ್ತದೆ.

* ಉದ್ಯೋಗಸ್ಥ ತಾಯಂದಿರು. ಅವಕಾಶ ಮಾಡಿಕೊಂಡು ನಿಮ್ಮ ಲಸಿಕೆ ನೀಡುವ ಕಾರ್ಯಕ್ರಮಕ್ಕೆ ಬರುವ ಪ್ರಯತ್ನ ಮಾಡಬೇಕು. ಅವರು ಬಹಳ ದೂರ ನಡೆಯಬೇಕಾಗಬಹುದು ಅಥವಾ ಸಾರಿಗೆಗೆ ಹಣ ಕೊಡಬೇಕಾಗಬಹುದು. ಅವರು ಮತ್ತೆ ಯಾವಾಗ ಬರಬೇಕೆಂಬುದನ್ನು ನೆನಪಿಡಬೇಕು.

* ನೀವು ದೂರದ ಸ್ಥಳಗಳಲ್ಲಿ ಲಸಿಕೆ ನೀಡಬೇಕಾದರೆ ಜನರ ಸಹಕಾರ ಅತ್ಯಂತ ಅವಶ್ಯ. ಲಸಿಕೆ ನೀಡುವ ಸ್ಥಳ ದೊರಕಿಸಲು ಉಪಕರಣಗಳನ್ನು ಪಡೆಯಲು ಮತ್ತು ಲಸಿಕೆ ನೀಡುವಾಗಲೂ ಅವರ ಸಹಾಯ ಬೇಕಾಗಬಹುದು. ಲಸಿಕೆ ನೀಡುವಾಗ ಹೆಸರುಗಳನ್ನು ನೊಂದಾಯಿಸಿಕೊಳ್ಳಲು, ಮಕ್ಕಳ ತೂಕ ನೋಡಲು ಸ್ಥಳೀಯರನ್ನು ಉಪಯೋಗಿಸಿಕೊಳ್ಳಬಹುದು. ತಾಯಂದಿರಿಗೆ ಪ್ರೋತ್ಸಾಹಿಸಲು ಮತ್ತು ಶಿಬಿರಕ್ಕೆ ಬರಲು ನೆನಪುಕೊಡಲು ಜನರ ಸಹಾಯ ಬೇಕು.

* ತಮ್ಮ ಮಕ್ಕಳಿಗೆ ಲಸಿಕೆ ಬೇಕೆನಿಸಿದರೆ ಮಾತ್ರ ಜನ ಕಾರ್ಯಕ್ರಮದ ಯಶಸ್ಸಿಗೆ ಸಹಕಾರ ನೀಡುತ್ತಾರೆ. ನೀವು ಕೊಡುವಿರೆಂದು ಮಾತ್ರ ಲಸಿಕೆ ಪಡೆಯುವುದಾದರೆ ಜನ ಸರಿಯಾಗಿ ಸಹಕರಿಸುವುದಿಲ್ಲ. ತಮ್ಮ ಮಕ್ಕಳ ಆರೋಗ್ಯ ತಮ್ಮ ಹೊಣೆ ಎನ್ನುವುದು ಅವರಿಗೆ ಮನವರಿಕೆಯಾಗಬೇಕು, ಅವರಿಗೆ ಬೇಕೆನಿಸಿದ ಮತ್ತು ಅವರು ಬೆಲೆ ಕೊಡುವಂತಹದನ್ನು ಪಡೆಯಲು ನೀವು ಸಹಾಯ ಮಾಡುತ್ತೀರಿ.

* ಆದ್ದರಿಂದ. ಮೊದಲು ಜನರಿಗೆ ಲಸಿಕೆ ನೀಡುವ ಕಾರ್ಯಕ್ರಮ ಬೇಕೆನಿಸುವ ಹಾಗೆ ಮಾಡಬೇಕು. ಅಂದರೆ ಜನರ ಮನವೊಲಿಸಬೇಕು.

## 6.2 ಜನರಿಗೆ ನಿಮ್ಮ ಲಸಿಕೆ ನೀಡುವ ಕಾರ್ಯಕ್ರಮ ಬೇಕೆನಿಸುವ ಹಾಗೆ ಹೇಗೆ ಮಾಡಬಹುದು ?

**ಮೊದಲು — ಸಮುದಾಯದಲ್ಲಿ ನಿಮಗೆ ಸಹಾಯಮಾಡಬಲ್ಲಂತಹ ಜನರನ್ನು ಗುರುತಿಸಿ**

ರಾಜಕೀಯ ಮುಖಂಡರು
ಸಾಮಾಜಿಕ ಮುಖಂಡರು
ಇತರ ಇಲಾಖೆಗಳ ಸರಕಾರಿ ಸಿಬ್ಬಂದಿ
ವಿಸ್ತರಣಾ ಕಾರ್ಯಕರ್ತರು (ಉದಾ : ಕೃಷಿ)
ಮಹಿಳಾ ಗುಂಪುಗಳು (ಮಹಿಳಾ ಮಂಡಳಿಗಳು)
ಸಮುದಾಯ ಆರೋಗ್ಯ ಸ್ವಯಂಸೇವಕರು
ತರಬೇತಿ ಹೊಂದಿದ ದಾದಿಯರು
ಶಾಲಾ ಶಿಕ್ಷಕರು
ಧಾರ್ಮಿಕ ಮುಖಂಡರು
ಕಾರ್ಮಿಕ ಮುಖಂಡರು

ಪ್ರತಿಯೊಂದು ಸಮುದಾಯ ಭಿನ್ನವಾಗಿರುತ್ತದೆ. ಸರಿಯಾದ ಜನರನ್ನು ಗುರುತಿಸಬೇಕು ಅವರಿಗೆ ಗುರಿಯಾಗಿಟ್ಟುಕೊಂಡಿರುವ ಕಾಯಿಲೆಗಳ ಅಪಾಯಗಳ ಬಗ್ಗೆ ಮತ್ತು ಅವುಗಳನ್ನು ಪ್ರತಿಬಂಧಿಸುವುದು ಹಾಗೂ ಲಸಿಕೆಗಳ ಬಗ್ಗೆ ವಿವರಿಸಿ.

ಜನರ ವಿಶ್ವಾಸವನ್ನು ಹೇಗೆ ಗಳಿಸುವುದೆಂಬ ಬಗ್ಗೆ ಅವರ ಸಲಹೆ ಕೇಳಿ.

ಇರಬಹುದಾದ ಸಮಸ್ಯೆಗಳು ಮತ್ತು ವಿರೋಧಗಳ ಬಗ್ಗೆ ಅವರ ಸಲಹೆ ಕೇಳಿ

ಸಮುದಾಯಕ್ಕೆ ಕಾರ್ಯಕ್ರಮದ ಬಗ್ಗೆ ವಿವರಿಸುವಲ್ಲಿ ಅವರ ಸಹಾಯ ಕೇಳಿ.

ಆ ಪ್ರದೇಶದ ಜನಸಮುದಾಯಕ್ಕೆ ಬರಲು ಸುಲಭವಾಗುವಂತೆ ಲಸಿಕೆ ಕಾರ್ಯಕ್ರಮಗಳ ವ್ಯವಸ್ಥೆ ಮಾಡಲು ಅವರ ಸಹಾಯ ಕೇಳಿ ಉದಾ : ಸ್ಥಳೀಯ ಸಂತೆಯ ದಿವಸ.

ಜನರನ್ನು ಲಸಿಕೆ ಪಡೆಯಲು ಬರಲು ಪ್ರೋತ್ಸಾಹಿಸುವಂತೆ ಕೇಳಬಹುದು.

**ಎರಡನೆಯದಾಗಿ – ಲಸಿಕೆ ನೀಡುವ ಕಾರ್ಯಕ್ರಮ ಸಮಾಜಕ್ಕೆ ಒಳ್ಳೆಯ ಅನುಭವವಾಗುವಂತೆ ಮಾಡಿ**

ನಿಮ್ಮ ಕಾರ್ಯಕ್ರಮದ ಬಗ್ಗೆ ಅವರಿಗಾಗುವ ಅನುಭವ ಅವರ ಮನವೊಲಿಸುವಲ್ಲಿ ಬಹಳ ಪರಿಣಾಮ ಬೀರುತ್ತದೆ. ಸಂದರ್ಭೋಚಿತವಾಗಿಯೂ ಪ್ರಾಮಾಣಿಕರಾಗಿ, ಸಭ್ಯರಾಗಿ ಮಿತ್ರರಾಗಿಯೂ ಇರಿ. ನೀವು ಜನರಿಗೆ ವಿಶ್ವಾಸಾರ್ಹರಾಗಬೇಕು. ಕಾಲ ನಿಷ್ಠರೂ, ವಿನಯಶಾಲಿಗಳೂ ಸ್ನೇಹಪರರೂ ಆಗಿರಬೇಕು. ಲಸಿಕೆಗಳು ಕೆಲಸ ಮಾಡುವಂತೆ ಅವುಗಳನ್ನು ನೋಡಿಕೊಳ್ಳಿ. ಸಮುದಾಯಕ್ಕೆ ಮರು ಮಾಹಿತಿ ನೀಡಿ ಮತ್ತು ನಿಮ್ಮ ಕೆಲಸದ ಪರಿಣಾಮದ ಬಗ್ಗೆ. ಎಷ್ಟು ಮಕ್ಕಳಿಗೆ ಲಸಿಕೆ ಕೊಟ್ಟಿರುವುದನ್ನು ಜನರಿಗೆ ತಿಳಿಸಿ.

## 5.3 ಸಮುದಾಯದ ಭಾಗವಹಿಸುವಿಕೆ

ಸಮುದಾಯದ ಭಾಗವಹಿಸುವಿಕೆಯಲ್ಲಿ ಕಂಡುಬರುವ ಕೊರತೆಯ ಕಾರಣಗಳನ್ನು ಸ್ಥೂಲವಾಗಿ ಮೂರು ಭಾಗವಾಗಿ ವಿಂಗಡಿಸಬಹುದು :

### 5.3.1 ಮಾಹಿತಿಯ ಕೊರತೆ

ಅ. ಕಾಯಿಲೆಗಳ ತೀವ್ರತೆ ಅಥವಾ ಅವುಗಳಿಂದಾಗುವ ಅಪಾಯಗಳ ಬಗ್ಗೆ;

ಆ. ಈ ಕಾಯಿಲೆಗಳನ್ನು ತಡೆಗಟ್ಟಬಹುದೆಂಬ ಬಗ್ಗೆ;

ಇ. ಅವರ ಕ್ಷೇತ್ರಗಳಲ್ಲಿ ಸೇವೆಗಳು ದೊರಕುತ್ತವೆಯೆನ್ನುವ ಬಗ್ಗೆ.

ಈ. ಲಸಿಕೆ ನೀಡುವ ಸ್ಥಳ ಮತ್ತು ಸಮಯದ ಬಗ್ಗೆ.

ಉ. ಲಸಿಕೆ ಪಡೆಯಬೇಕಾದ ವಯಸ್ಸು ಮತ್ತು ಪೂರ್ಣಾವರ್ತಗಳನ್ನು ಮುಗಿಸಬೇಕಾದ ಅಗತ್ಯದ ಬಗ್ಗೆ.

### 5.3.2 ಮನವೊಲಿಕೆಯ ಕೊರತೆ

ಅ. ಲಸಿಕೆಯ ಸೇವೆಗಳಲ್ಲಿ ನಂಬಿಕೆ ಇರದೇ ಇರುವುದು.

ಆ. ಸಾಂಪ್ರದಾಯಿಕ ಪದ್ಧತಿಗಳಲ್ಲಿರುವ ನಂಬಿಕೆ.

ಇ. ಲಸಿಕೆಗಳು ಪ್ರಯೋಜನಕಾರಿಯಲ್ಲ ಅಥವಾ ತೊಂದರೆ ಮಾಡುತ್ತವೆಂಬ ವದಂತಿಗಳು.

ಈ. ಅಸಮರ್ಪಕ ಸೇವೆಗಳು ಮತ್ತು ಸಿಬ್ಬಂದಿಯ ಅಸೌಜನ್ಯದ ನಡತೆಗಳು.

ಉ. ಅಡ್ಡಪರಿಣಾಮಗಳ ಭಯ.

### 6.3.3 ಅಡಚಣೆಗಳು

ಅ. ಲಸಿಕೆಯ ಕೇಂದ್ರಗಳು ಅತಿ ದೂರವಿರುವುದು

ಆ. ಅನುಕೂಲವಲ್ಲದ ಸಮಯ

ಇ. ಕೇಂದ್ರಕ್ಕೆ ಹೋಗಲು ಅನುಕೂಲವಿಲ್ಲದಿರುವುದು ಅಥವಾ ಹೆಚ್ಚಿನ ವೆಚ್ಚ ತಗಲುವುದು

ಕಾರಣಗಳು ಸ್ಥಳದಿಂದ ಸ್ಥಳಕ್ಕೆ ಬೇರೆಯಾಗಬಹುದು, ಆದರೂ ಜನರ ಪ್ರತಿವರ್ತನೆಯಲ್ಲಿ ಕೊರತೆ ಕಂಡರೆ ಈ ಅಂಶಗಳ ಬಗ್ಗೆ ಗಮನಕೊಡಬೇಕು. ಸಾಮಾನ್ಯವಾಗಿ ಜನರಿಗೆ ಸರಿಯಾದ ಮಾಹಿತಿ ಇಲ್ಲದಿರುವುದು ಅಥವಾ ಅನಾನುಕೂಲಕರ ಸ್ಥಳ ಅಥವಾ ಸಮಯ ಕಾರಣವೆಂಬುದು ಕಂಡು ಬಂದಿದೆ. ಸೌಜನ್ಯಪೂರ್ಣ ಮತ್ತು ಸಮರ್ಥ ಸೇವೆಗಳು ಜನರು ಪಾಲುಗೊಳ್ಳುವಂತೆ ಮಾಡಲು ನೆರವಾಗುತ್ತವೆ. ಸಿರಿಂಜು ಮತ್ತು ಸೂಜಿಗಳನ್ನು ಸರಿಯಾಗಿ ಸಂಸ್ಕರಿಸದ ಅಥವಾ ತಪ್ಪು ತಾಂತ್ರಿಕ ವಿಧಾನದಿಂದ ಲಸಿಕೆ ನೀಡಿ ಯಾವುದೇ ವಿಪರೀತ ಪ್ರತಿಕ್ರಿಯೆ ಕಾರಣ ಕಾರ್ಯಕ್ರಮದ ಮೇಲ್ವಿಚಾರಣೆ ನಡೆಸುವುದು ಅಗತ್ಯ.

ಆರೋಗ್ಯ ಶಿಕ್ಷಣ ಸ್ಥಳೀಯ ಜನರಿಗೆ ಅರ್ಥವಾಗುವ ಭಾಷೆ ಮತ್ತು ವಿಷಯಗಳನ್ನೊಳಗೊಂಡಿರಬೇಕು. ಆರೋಗ್ಯ ಶಿಕ್ಷಣ ನೀಡುವ ವ್ಯಕ್ತಿ ಅನುಭವಸ್ಥನೂ ತಿಳುವಳಿಕೆಯುಳ್ಳವನೂ ಮತ್ತು ಚಾಲಕ ಶಕ್ತಿಯುಳ್ಳವನೂ ಆಗಿರಬೇಕು. ಸರಳ ಸಂದೇಶಗಳನ್ನು ನೀಡಲು ತರಬೇತಿ ಪಡೆದ ದಾಯಿಯರೂ ಸೇರಿದಂತೆ ಸಮುದಾಯ ಆರೋಗ್ಯ ಸ್ವಯಂಸೇವಕರು ಮತ್ತು ಅಂಗನವಾಡಿ ಕಾರ್ಯಕರ್ತರು ಮೊದಲಾಗಿ ಆರೋಗ್ಯ ತಂಡದ ಎಲ್ಲರನ್ನು ಬಳಸಿಕೊಳ್ಳಬೇಕು.

ಕಾಯಿಲೆಗಳು ಮತ್ತು ಲಸಿಕೆಯ ವೇಳಾಪಟ್ಟಿಗಳ ಮಾಹಿತಿ ಕೊಡುವ ಭಿತ್ತಿ ಪತ್ರಗಳನ್ನು ಸರಿಯಾದ ಸ್ಥಳಗಳಲ್ಲಿಡಬೇಕು. ಒದಗಿಸುವ ಬೋಧಕ ಮತ್ತು ಪ್ರಚಾರ ಸಾಧನಗಳನ್ನು ಉಪಯೋಗಿಸಬೇಕು.

**6.4** ಎದುರಿಸಿದ ಸಮಸ್ಯೆಗಳನ್ನು ವೈದ್ಯಾಧಿಕಾರಿಗಳೊಡನೆ ಚರ್ಚಿಸಿ. ಸಂಶಯಗಳೇನಾದರೂ ಇದ್ದರೆ ಧಾರಾಳವಾಗಿ ಪ್ರಶ್ನೆ ಕೇಳಿ ತಿಳಿದುಕೊಳ್ಳಿ. ಪೂರ್ಣವರಸೆಯ ಲಸಿಕೆ ಪಡೆದ ಗರ್ಭಿಣಿಯರು ಮತ್ತು ಮಕ್ಕಳ ಸಂಖ್ಯೆಯಿಂದ ಜನರ ಮನವೊಲಿಸುವಲ್ಲಿ ನಿಮ್ಮ ಯಶಸ್ಸನು ಅಂದಾಜು ಮಾಡಬಹುದು. ಪೂರ್ಣವರಸೆಗಳಿಂದ ತಪ್ಪಿಸಿಕೊಳ್ಳುವ ಹೆಚ್ಚಿನ ಪ್ರಮಾಣಗಳು ನಿಮ್ಮ ಕ್ಷೇತ್ರದಲ್ಲಿರುವ ಸಮಸ್ಯೆಯ ಸೂಚಕಗಳು. ತಕ್ಷಣ ಅದನ್ನು ಗಮನಿಸಿ ನಿಮ್ಮ ವೈದ್ಯಾಧಿಕಾರಿಯೊಂದಿಗೆ ಸಮಾಲೋಚಿಸಿ ಅವಶ್ಯಕ ಅಗತ್ಯ ಕ್ರಮ ತೆಗೆದುಕೊಳ್ಳಿ. ನಿಮ್ಮ ಕಾರ್ಯಕ್ಷೇತ್ರದ ಎಲ್ಲ ಮಕ್ಕಳೂ ತಮ್ಮ ಮೊದಲ ಹುಟ್ಟಿದ ಹಬ್ಬದ ವೇಳೆಗೆ 3 ವರಸೆ ಡಿಪಿಟಿ, ಪೋಲಿಯೊ ಮತ್ತು ಒಂದು ವರಸೆ ಬಿಸಿಜಿ ಮತ್ತು ದಡಾರ ಹಾಗೂ ಎಲ್ಲ ಗರ್ಭಿಣಿಯರು ಎರಡು ಅಥವಾ ಬಲವರ್ಧಕ ಟಿಟಿ ಪಡೆದಿದ್ದರೆ ನಿಮ್ಮ ಕಾರ್ಯಕ್ರಮಕ್ಕೆ ಒಳ್ಳೆಯ ಸಮುದಾಯ ಪ್ರತಿಕ್ರಿಯೆ ಪಡೆಯುವಲ್ಲಿ ನೀವು ಯಶಸ್ವಿಯಾಗಿದ್ದೀರಿ ಎಂದರ್ಥ.

---

**ನೆನಪಿಡಿ**

* ಲಸಿಕೆಗಾಗಿ ಮುಂದಿನ ಭೇಟಿಯ ಬಗ್ಗೆ ತಾಯಂದಿರಿಗೆ ನೆನಪುಕೊಡಿ.
* ಯೋಜಿತ ದಿನ ಮತ್ತು ಸಮಯಕ್ಕೆ ಸರಿಯಾಗಿ ಲಸಿಕೆ ನೀಡುವ ಶಿಬಿರ ನಡೆಸಿ.
* ಸಭ್ಯತೆ ಮತ್ತು ಸೌಜನ್ಯದಿಂದ ವರ್ತಿಸಿ.
* ಸಂಸ್ಕರಣೆ ಮಾಡದ ಅಥವಾ ಮೊಂಡಾದ ಸೂಜಿಗಳನ್ನುಪಯೋಗಿಸಬೇಡಿ.
* ಸೌಮ್ಯ ಕಾಯಿಲೆಗಳು ಬಾಧಕ ಲಕ್ಷಣಗಳಲ್ಲ ಲಸಿಕೆ ನೀಡಿ.
* ಲಸಿಕೆಗಳಿಂದ ತಡೆಗಟ್ಟಬಹುದಾದ ಪೋಲಿಯೋ, ನವಜಾತ ಶಿಶುವಿನ ಧನುರ್ವಾತ, ನಾಯಿಕೆಮ್ಮು ಮತ್ತು ದಡಾರದಂತಹ ಕಾಯಿಲೆಗಳ ಬಗ್ಗೆ ವರದಿ ಕೊಡಿ.

---

# 7. ಕಾಯಿಲೆಗಳ ನಿವಾರಣೆ

ಲಸಿಕೆ ನೀಡುವ ಕಾರ್ಯಕ್ರಮದ ಅಂತಿಮ ಗುರಿ, ಲಸಿಕೆಯಿಂದ ತಪ್ಪಿಸಬಲ್ಲ ಕಾಯಿಲೆಗಳಾದ ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾತ, ಪೋಲಿಯೊ, ಬಾಲ್ಯಾವಸ್ಥೆಯ ಕ್ಷಯ, ದಢಾರ ಮತ್ತು ವಿಷಮಶೀತ ಜ್ವರಗಳ ಸಂಭವವನ್ನು ಕಡಿಮೆ ಮಾಡುವುದು. ಕಾಯಿಲೆಗಳ ನಿಗಾವಣೆ ಈ ಕಾರ್ಯಕ್ರಮದ ಮುಖ್ಯ ಅಂಗ. ಕಾಯಿಲೆ ಬೀಳುವವರ ಬಗ್ಗೆ ಕ್ರಮವಾದ ಮತ್ತು ಸಕಾಲಿಕವಾದ ಮಾಹಿತಿ ದೊರೆಯುತ್ತಿದ್ದರೆ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಯೋಜಿಸಬಹುದು. ಸಕಾಲದಲ್ಲಿ ಕೊರತೆಗಳನ್ನು ಗುರುತಿಸಿ, ಅವುಗಳನ್ನು ಸರಿಪಡಿಸುವ ಕ್ರಮ ಕೈಗೊಳ್ಳುವಂತೆ ಕಾರ್ಯಕ್ರಮವನ್ನು ನಿರ್ವಹಿಸಲು ಈ ಮಾಹಿತಿ ಅವಶ್ಯಕ. ಕಾಯಿಲೆಗಳ ಮೇಲೆ ಲಸಿಕೆ ನೀಡುವುದರ ಪರಿಣಾಮವನ್ನು ನಿರ್ಧರಿಸಲು ಸಮರ್ಥ ನಿಗಾವಣೆ ವ್ಯವಸ್ಥೆಯಿದ್ದರೆ ಮಾತ್ರ ಸಾಧ್ಯ. ಪ್ರತಿಯೊಬ್ಬ ಆರೋಗ್ಯ ಕಾರ್ಯಕರ್ತನೂ ಗ್ರಾಮಗಳಲ್ಲಿ ಲಸಿಕೆಯಿಂದ ತಡೆಗಟ್ಟಬಲ್ಲ ಕಾಯಿಲೆಗಳನ್ನು ಗಮನಿಸಿ ಆರೋಗ್ಯ ಕೇಂದ್ರಕ್ಕೆ ತಿಳಿಸಬೇಕು. ಇದರಿಂದ ಆ ಭಾಗದಲ್ಲಿ ಆಗುವ ಕಾಯಿಲೆಗಳ ಸಂಖ್ಯೆಯನ್ನು ತಿಳಿಯಲಷ್ಟೆ ಅಲ್ಲ, ಕಾಯಿಲೆ ಬರುವ ವಯಸ್ಸು, ಅದರ ತೀವ್ರತೆ ಮತ್ತು ಲಸಿಕೆ ಪಡೆದವರ ಸ್ಥಿತಿಯ ಬಗ್ಗೆ ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

ಲಸಿಕೆಗಳಿಂದ ನಿಯಂತ್ರಿಸಬಲ್ಲ ಕಾಯಿಲೆಗಳಾವುವು ಎನ್ನುವುದನ್ನು ನೀವು ತಿಳಿದಿರಬೇಕು. ನಿಮ್ಮ ಕ್ಷೇತ್ರದಲ್ಲಿ ಅವುಗಳು ಸಂಭವಿಸಿದಾಗ ಗುರುತಿಸುವುದಲ್ಲದೆ ಜನರಿಗೆ ಅವುಗಳ ಬಗ್ಗೆ ಅಗತ್ಯ ಮಾಹಿತಿ ಕೊಡಲು ಸಮರ್ಥರಿರಬೇಕು.

## 7.1 ಪೋಲಿಯೋ (ನರಮಜ್ಜೆ ರೋಗ)

ಪೋಲಿಯೋ ರೋಗ ಸೂಕ್ಷ್ಮ ವಿಷಾಣು ಜೀವಿಗಳಿಂದಾಗುವುದು. ಕಲುಷಿತ ನೀರು ಆಹಾರ ಮತ್ತು ಸಣ್ಣ ಕಣಗಳ ರೂಪದಲ್ಲಿ ಗಾಳಿಯ ಮುಖಾಂತರ ಈ ವಿಷಾಣು ಜೀವಿಗಳು ಹರಡುತ್ತವೆ. ದೇಹಕ್ಕೆ ಸೋಂಕು ತಗಲಿದ 5 ರಿಂದ 14 ದಿನಗಳ ನಂತರ ಸಾಮಾನ್ಯವಾಗಿ ರೋಗಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

1 ರಿಂದ 3ನೇ ದಿವಸ — ಮಗುವಿಗೆ ಸ್ವಸ್ಥವಾಗಿರುವುದಿಲ್ಲ. ಜ್ವರವಿರುತ್ತದೆ.

3 ರಿಂದ 5ನೇ ದಿವಸ — ಮಗುವಿಗೆ ಜ್ವರ ತಲೆನೋವು, ಬಳಲಿಕೆ ಮತ್ತು ಕತ್ತು ಹಾಗೂ ಬೆನ್ನಿನಲ್ಲಿ ಬಿಗಿತ ಹಾಗೂ ಸ್ನಾಯುಗಳಲ್ಲಿ ನೋವಿರುತ್ತದೆ.

— ಸಾಮಾನ್ಯವಾಗಿ ಒಂದು ಕಾಲು ಅಥವಾ ಕೈಯ ಪಾರ್ಶ್ವವಾಯು. ತೀವ್ರ ಹಂತ ಮುಗಿದ ನಂತರ ಪಾರ್ಶ್ವವಾಯು ಹೆಚ್ಚಾಗುವುದಿಲ್ಲ. ಅದು ಮೆತ್ತಗಿನ ಬಗೆಯದು. ಸ್ಪರ್ಶ ಮತ್ತು ನೋವಿನ ಜ್ಞಾನಗಳಿಗೆ ತೊಂದರೆಯಾಗುವುದಿಲ್ಲ.

## 7.2 ನವಜಾತರ ಧನುರ್ವಾತ

ಸಾಮಾನ್ಯವಾಗಿ ನವಜಾತ ಶಿಶುವಿಗೆ ಧನುರ್ವಾತವು ಹುಟ್ಟಿದ 2 ರಿಂದ 10 ದಿನಗಳೊಳಗೆ ಸಂಭವಿಸುತ್ತದೆ. ಹೊಕ್ಕಳ ಹುರಿಯನ್ನು ಅಸ್ವಚ್ಛ ಪರಿಸ್ಥಿತಿಗಳಲ್ಲಿ ಕೊಯ್ಯುವುದರಿಂದ ಅಥವಾ ಅದರ ಮೇಲೆ ಕೊಳಕು ಪಟ್ಟಿ ಕಟ್ಟುವುದರಿಂದ ಸೋಂಕು ಉಂಟಾಗುತ್ತದೆ.

ಹುಟ್ಟಿದಾಗ ಮಗು ಆರೋಗ್ಯವಾಗಿ ಕಂಡು ಚೆನ್ನಾಗಿ ಸ್ತನ ಚೀಪುತ್ತಿರುತ್ತದೆ.
ಹುಟ್ಟಿದ 3–10 ದಿನಗಳಲ್ಲಿ ಮಗುವಿಗೆ ಚೀಪುವುದಕ್ಕಾಗುವುದಿಲ್ಲ. ಮಗು ಮೂರ್ಛೆ ಹೋಗುವುದು ಅಥವಾ ಮುಖ ಮತ್ತು ಮುಂಡದ ಸ್ನಾಯುಗಳಲ್ಲಿ ಬಿಗಿತವಿರುವುದು.

ಸಾಮಾನ್ಯವಾಗಿ ರೋಗದ ಪರಿಣಾಮ ಮಾರಕ.

ಗರ್ಭಿಣಿಯರಿಗೆ ಧನುರ್ವಾಯು ನಿರೋಧಕ ಚುಚ್ಚು ಮದ್ದು ಕೊಡುವುದಷ್ಟೆ ಅಲ್ಲದೆ ಹೆರಿಗೆ ಸಮಯದಲ್ಲಿ ಅನಾರೋಗ್ಯಕರ ಅಭ್ಯಾಸಗಳನ್ನು ತಪ್ಪಿಸಲು ಮತ್ತು ಹೊಕ್ಕಳ ಹುರಿಯನ್ನು ಕತ್ತರಿಸಲು ಸಂಸ್ಕರಿಸಿದ ಉಪಕರಣಗಳನ್ನು ಉಪಯೋಗಿಸಲು ಹಾಗೂ ಈ ಹೊಕ್ಕಳ ಹುರಿಯ ಮೇಲೆ ಬೂದಿ, ಸಗಣಿ ಮತ್ತಿತರ ಕಲುಷಿತ ವಸ್ತುಗಳನ್ನು ಹಚ್ಚದೆ ಇರಲು ದಾದಿಯರು ಮತ್ತು ಸೂಲಗಿತ್ತಿಯರಿಗೆ ತರಬೇತಿ ಕೊಡುವುದು ಮುಖ್ಯವಾದುದು.

ಹುಟ್ಟಿದ ಒಂದು ತಿಂಗಳೊಳಗೆ ಆಗುವ ಯಾವುದೇ ಮರಣದ ಬಗ್ಗೆ ನಿಮಗೆ ವರದಿ ನೀಡುವಂತೆ ಸಮುದಾಯ ಆರೋಗ್ಯ ಮಾರ್ಗದರ್ಶಕರು ತರಬೇತಿ ಹೊಂದಿದ ದಾದಿಯರಿಗೆ ಮತ್ತಿತರರಿಗೆ ತಿಳಿಸಬೇಕು:

## 7.3 ದೊಡ್ಡ ಮಕ್ಕಳು ಮತ್ತು ಪ್ರೌಢರಲ್ಲಿ ಧನುರ್ವಾತ

(ಗಾಯ. ಸುಟ್ಟಗಾಯ ಇತ್ಯಾದಿ) ಚರ್ಮದ ಬಿರಿದ ಭಾಗ ಮಣ್ಣು. ಧೂಳು ಅಥವಾ ಇವುಗಳನ್ನು ಹೊಂದಿರುವ ಇತರ ವಸ್ತುಗಳಿಂದ ಕಲುಷಿತಗೊಂಡಾಗ ರೋಗದ ಸುಪ್ತಾವಸ್ಥೆಯ ಕಣಗಳು ದೇಹವನ್ನು ಸೇರುತ್ತವೆ. ಹಲ್ಲು ಕೀಳಲು ಮತ್ತು ಕಿವಿಯನ್ನು ಸ್ವಚ್ಛ ಮಾಡಲು ಉಪಯೋಗಿಸಿದ ಪರಿಷ್ಕರಣಗೊಳ್ಳದ ಉಪಕರಣಗಳಿಂದಲೂ ಈ ಸುಪ್ತರೋಗಾಣುಗಳು ಹರಡಬಹುದು. 5 ವರ್ಷದ ಕೆಳಗಿನ ಮಕ್ಕಳಲ್ಲಿ ಧನುರ್ವಾತಕ್ಕೆ ಕಿವಿಯ ಸೋಂಕುಗಳು ಪೂರ್ವಭಾವೀ ಕಾರಣಗಳಾಗಬಹುದೆಂಬುದು ಕಂಡುಬಂದಿದೆ.

— ದವಡೆಯ ಸ್ನಾಯುಗಳಲ್ಲಿ ತುಡಿತ ಮತ್ತು ನೋವು ಸಹಿತ ಬಿಗಿತವಿರುತ್ತದೆ.

— ಕತ್ತು ಮತ್ತು ಮುಂಡದ ಸ್ನಾಯುಗಳ ಸೆಳೆತದಿಂದ ದೇಹ ಬಿಲ್ಲಿನಂತೆ ಬಾಗಿರುತ್ತದೆ.

— ಬಹಳ ಜನ ಸಾಯುತ್ತಾರೆ.

## 7.4 ಗಂಟಲುಮಾರಿ (ಡಿಫ್ತೀರಿಯಾ)

ರೋಗದ ಸೂಕ್ಷ್ಮಕ್ರಿಮಿ (ಬ್ಯಾಕ್ಟೀರಿಯಾ) ಗಳು ಗಾಳಿಯಲ್ಲಿ ಹರಡುತ್ತವೆ. ರೋಗಿಯ ಸಂಪರ್ಕದಿಂದ 2 ರಿಂದ 10 ದಿನಗಳ ನಂತರ ರೋಗಲಕ್ಷಣಗಳು ಕಾಣುತ್ತವೆ.

1–3 ದಿನಗಳು— ಮಗುವಿಗೆ ಗಂಟಲು ನೋವಿರುತ್ತದೆ.
ತಲೆನೋವು
ಸಾಧಾರಣ ಜ್ವರ
ಸರಿಯಾಗಿ ಊಟಮಾಡುವುದಿಲ್ಲ
ಆಟವಾಡುವುದಿಲ್ಲ

— ಕತ್ತು ಸ್ವಲ್ಪ ಬಾತಿರುತ್ತದೆ

— ಗಂಟಲಿನಲ್ಲಿ ಬಿಳಿಯ ಪೊರೆಯೊಂದಿರುತ್ತದೆ.

4–6 ದಿನಗಳು — ಮಗು ತುಂಬ ಅಸ್ವಸ್ಥವಾಗಿರುತ್ತದೆ.
ಕತ್ತು ಬಹಳ ಬಾತಿರುತ್ತದೆ.
ಗಂಟಲಿನಲ್ಲಿ ಬೂದು ಅಥವಾ ಬಿಳಿಯ ಬಣ್ಣದ ಪೊರೆ ಇರುತ್ತದೆ. ಈ ಪೊರೆಯ ಅಂಚುಗಳು ಚೆನ್ನಾಗಿ ಮೂಡಿರುತ್ತವೆ.

— ಬಹಳ ಸಲ ಗಂಟಲು ಮಾರಿ ಕ್ರಮೇಣ ಶ್ವಾಸನಾಳಕ್ಕೆ ಹರಡಿ ಮಗುವಿಗೆ ಉಸಿರಾಡಲಾಗುವುದಿಲ್ಲ

— ರೋಗಾಣುವಿನ ವಿಷ ಸ್ರಾವ ಹೃದಯದ ಸ್ನಾಯು ಮತ್ತು ನರಗಳ ಮೇಲೂ ಪರಿಣಾಮ ಬೀರಬಹುದು.

## 7.5 ನಾಯಿಕೆಮ್ಮು

ರೋಗದ ಆರಂಭದ ಹಂತದಲ್ಲಿ ತೀವ್ರ ಸೋಂಕಿರುವ ಮಗು ಕೆಮ್ಮಿದಾಗ ಸಣ್ಣ ಹನಿಗಳಾಗಿ ರೋಗಾಣುಗಳು ಗಾಳಿಯ ಮುಖಾಂತರ ಹರಡುತ್ತವೆ.

ಮೊದಲನೆ ವಾರ — ಮಗುವಿಗೆ ಕೆಮ್ಮಿರುತ್ತದೆ. ಮೂಗು ಸೋರುತ್ತದೆ ಮತ್ತು ಸ್ವಲ್ಪ ಜ್ವರವಿರುತ್ತದೆ.

ಕೆರಳಿಕೆ
ನಿದ್ರೆ ಬರದಿರುವುದು
ಮಲಬದ್ಧತೆ – ಇವುಗಳ ಬಗ್ಗೆ ಹೇಳಬಹುದು.

ಮಗುವಿನಲ್ಲಿ – ಎಡಬಿಡದ ಜ್ವರ
ಕ್ಷೀಣ ನಾಡಿ ಮಿಡಿತ
ಹೊಲಸು ಕಂದು ಬಣ್ಣದ ಕವಚಗಟ್ಟಿದ ನಾಲಿಗೆ
ದೊಡ್ಡದಾದ ಯಕೃತ್ ಇವು ಕಾಣಿಸಿಕೊಳ್ಳುತ್ತದೆ.

ನಿಮ್ಮ ಗಮನಕ್ಕೆ ಬಂದ ರೋಗಿಗಳ ವರದಿಯನ್ನು ಹೆಚ್ಚಿನ ಪರೀಕ್ಷೆ ಮತ್ತು ಅವಶ್ಯವಿದ್ದರೆ ಉಪಚಾರಕ್ಕೆ ಅನುಕೂಲವಾಗುವಂತೆ ವೈದ್ಯಾಧಿಕಾರಿಗಳಿಗೆ ತಿಳಿಸಿ.

# 8. ಲಸಿಕೆ ನೀಡುವ ಕಾರ್ಯಕ್ರಮದ ಮೇಲ್ವಿಚಾರಣೆ

## 8·1 ದಾಖಲೆಗಳು ಮತ್ತು ವರದಿಗಳು

ಕನಿಷ್ಠ ದಾಖಲೆಗಳು : ಲಸಿಕೆ ನೀಡುವ ಕಾರ್ಯಕ್ರಮದಲ್ಲಿರಬೇಕಾದ ಕನಿಷ್ಠ ದಾಖಲೆಗಳು

ಅ) ವಯಸ್ಸು ಮತ್ತು ವರಸೆಗನುಗುಣವಾಗಿ ನೀಡಿದ ಲಸಿಕೆಗಳ ದಾಖಲೆಗಳು

ಬ) ರೋಗದ ಪ್ರಸಂಗ ಮತ್ತು ಮರಣಗಳ ದಾಖಲೆಗಳು

ಕ) ತಿಂಗಳಲ್ಲಿ ಪಡೆದ ಮತ್ತು ಉಪಯೋಗಿಸಿದ ಲಸಿಕೆಗಳ ದಾಖಲೆ

ಡ) ಶೀತಕದ ಉಷ್ಣಾಂಶ ದಾಖಲೆ

## 8·2 ಲಸಿಕೆ ನೀಡಿದ ಸಾಧನ

ದಾಖಲೆಗಳನ್ನು ಕೇಂದ್ರದಲ್ಲಿ ಒಂದು ಪುಸ್ತಕವಲ್ಲಿಡಬೇಕು. ಈ ದಾಖಲೆಯಲ್ಲಿ ಮಗುವಿನ ಹೆಸರು, ವಿಳಾಸ ಮತ್ತು ಕೊಟ್ಟ ಲಸಿಕೆ ಮತ್ತು ವರಸೆಯ ಸಂಖ್ಯೆಗಳನ್ನು ಕಾಣಿಸಬೇಕು.

ಅಂದು ಉಪಯೋಗಿಸಿದ ಲಸಿಕೆಗಳ ಗುಂಪಿನ ಸಂಖ್ಯೆ ಮತ್ತು ಕೊನೆಯದಿನಗಳನ್ನು ನಮೂದಿಸಬೇಕು.

ಪ್ರತಿ ಲಸಿಕೆಯ, ವರಸೆಗಳ ಪ್ರಕಾರ ನೀಡಿದ ಸಂಖ್ಯೆಗಳನ್ನು ಒಟ್ಟು ಗೂಡಿಸಿ, ನಿಶ್ಚಿತ ಸಮಯದಲ್ಲಿ ಮೇಲಾಧಿಕಾರಿಗಳಿಗೆ ಕಳುಹಿಸಬೇಕು. ಒಂದು ಅಥವಾ ಹೆಚ್ಚಿನ ಘಟಕಗಳಿಂದ ವರದಿಗಳು ತಡವಾದರೆ, ಎಲ್ಲ ಘಟಕಗಳೂ ಸರಿಯಾದ ಸಮಯಕ್ಕೆ ವರದಿ ಕಳುಹಿಸುವಂತೆ ಕ್ರಮ ತೆಗೆದುಕೊಳ್ಳಬೇಕು.

ಲಸಿಕೆ ನೀಡುವ ಕಾರ್ಡಿನಲ್ಲಿಯೂ, ಮಾಹಿತಿಯನ್ನು ತುಂಬಿ ಮಗುವಿನ ಪಾಲಕರ ಕೈಯಲ್ಲಿ ಕೊಡಬೇಕು.

## 8·3 ರೋಗ ಪ್ರಸಂಗ ಮತ್ತು ಮರಣಗಳು

ಲಸಿಕೆಗಳಿಂದ ತಡೆಗಟ್ಟಬಲ್ಲ ರೋಗಗಳ ಪ್ರಸಂಗಗಳು ಮತು ಮರಣಗಳ ಬಗ್ಗೆಯೂ ಆರೋಗ್ಯ ಕೇಂದ್ರದಲ್ಲಿ ದಾಖಲೆಗಳಿರಬೇಕು ಇದರಲ್ಲಿ ಸಾಮಾನ್ಯವಾಗಿ ಚಿಕಿತ್ಸೆಗೆ ಬಂದ ರೋಗಿಗಳು ಸೇರಿರುತ್ತಾರೆ.

ನವಜಾತ ಧನುರ್ವಾತ ಮತ್ತು ಇತರರಲ್ಲಿಯ ಧನುರ್ವಾತಗಳನ್ನು ಬೇರೆ ಬೇರೆ ವರದಿಮಾಡಬೇಕು ಪೋಲಿಯೋ ಪ್ರಕರಣಗಳು ವರದಿಯ ವರ್ಷದಲ್ಲಿ ರೋಗಲಕ್ಷಣ ಕಂಡು ಬಂದವರ ಬಗ್ಗೆ ಮಾತ್ರ ಇರಬೇಕಲ್ಲದೆ ಹಳೆಯ ಪೋಲಿಯೋ ಪ್ರಕರಣಗಳನ್ನೊಳಗೊಂಡಿರಬಾರದು.

ಲಸಿಕೆ ನೀಡಿಕೆ ವ್ಯಾಪಕವಾಗಿ ನಡೆದಿದ್ದು ತತ್ ಪರಿಣಾಮವಾಗಿ ರೋಗದ ಪ್ರಕರಣಗಳು ಕಡಿಮೆ ಆದಾಗ ಈ ರೋಗಗಳ ಹೊಸ ಪ್ರಕರಣಗಳನ್ನು ಕಂಡುಹಿಡಿಯುವ ಸಕ್ರಿಯ ಪ್ರಯತ್ನ ನಡೆಸಬೇಕು ಪ್ರತಿ ತಿಂಗಳೂ ಸಂಭವಿಸಿದ ರೋಗಪ್ರಕರಣಗಳು ಮತ್ತು ಮರಣಗಳ ಕ್ರೋಢೀಕೃತ ಪಟ್ಟಿಯನ್ನು ಮೇಲಾಧಿಕಾರಿಗಳಿಗೆ ಕಳುಹಿಸಿಕೊಡಬೇಕು. (ನಮೂನೆ 4 ಪುಟ 10).

## 8·4 ಲಸಿಕೆಗಳ ದಾಸ್ತಾನು

ಲಸಿಕೆಗಳಿಗನುಗುಣವಾಗಿ, ಪಡೆದ ವಯಾಲ್‌ಗಳ ಸಂಖ್ಯೆ ಮತ್ತು ಅವುಗಳ ಗುಂಪಿನ ಕ್ರಮಾಂಕ ಹಾಗೂ ಕೊನೆಯ ದಿನಗಳನ್ನು ರಿಜಿಸ್ಟರಿನಲ್ಲಿ ದಾಖಲೆ ಮಾಡಬೇಕು. ವಾಸ್ತವವಾಗಿ ಉಪಯೋಗಿಸಿದ ಲಸಿಕೆಯ ಪ್ರಮಾಣವನ್ನು ಒಳಕ್ಕೆ ವರದಿಯಾದ ಲಸಿಕೆ ನೀಡಿಕೆ ಸಂಖ್ಯೆ + 10%)ಯೊಂದಿಗೆ ತಾಳೆ ಹೊಂದಿಸಬೇಕು. ತಿಂಗಳ ಮೊದಲಿನಲ್ಲಿರುವ ಲಸಿಕೆ, ತಿಂಗಳಲ್ಲಿ ಪಡೆದ ಲಸಿಕೆ ಉಪಯೋಗಿಸಿದ ಲಸಿಕೆ ಮತ್ತು ಮುಂದಿನ ತಿಂಗಳ ಮೊದಲಿಗೆ ಉಳಿಯುವ ಲಸಿಕೆಗಳ ಮಾಹಿತಿಯನ್ನು, ಹೆಚ್ಚಿನ ಲಸಿಕೆಯ ಎಲ್ಲ ಬೇಡಿಕೆಗಳ ಜೊತೆ ಸೇರಿಸಬೇಕು.

### 8.5 ಶೀತಕದ ಉಷ್ಣಾಂಶದ ದಾಖಲೆ

ಶೀತಕದಲ್ಲಿಯ ಉಷ್ಣಾಂಶವನ್ನು ದಿನಕ್ಕೆರಡು ಸಲ ದಾಖಲ ಮಾಡಬೇಕು. ಈ ದಾಖಲೆ ಮೇಲ್ವಿಚಾರಕರ ಪರಿಶೀಲನೆಗೆ ಲಭ್ಯವಿರಬೇಕು. ಈ ದಾಖಲೆಯನ್ನು ಜಿಲ್ಲೆ ಅಥವಾ ರಾಜ್ಯಕ್ಕೆ ಕಳುಹಿಸಬೇಕಿಲ್ಲ.

ಮಾಡಬೇಕಾದ ಕೆಲವು ಕೆಲಸಗಳನ್ನು ಸರಿಯಾಗಿ ಮಾಡದಿದ್ದರೆ ಅಥವಾ ಮಾಡದೆಯೇ ಇದ್ದರೆ, ಕಾರ್ಯಕ್ರಮದ ಉದ್ದೇಶವನ್ನು ಸಾಧಿಸಲಾಗುವುದಿಲ್ಲ. ಈಗಾಗಲೇ ನಡೆದಿರುವ ಕೆಲಸವನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಅವಶ್ಯಕ, ಮೇಲ್ವಿಚಾರಣೆ ಮಾಡಬೇಕಾದ ಕೆಲವು ಅಂಶಗಳ ಪಟ್ಟಿಯೊಂದನ್ನು ಲಗತ್ತಿಸಲಾಗಿದೆ.

## ಸಾರ್ವತ್ರಿಕ ಲಸಿಕೆ ನೀಡುವ ಕಾರ್ಯಕ್ರಮ
## ಮಾಸಿಕ ವರದಿ

ಜಿಲ್ಲೆ/.ವೈ.ಮ ವಿ. ಕೋಡ್ ಕ್ರಮಾಂಕ :

ತಿಂಗಳು ______ 198 ______

ರಾಜ್ಯ : ______ ವೈದ್ಯಕೀಯ ಮಹಾವಿದ್ಯಾಲಯ : ______

ಜಿಲ್ಲೆ : ______

ವರದಿ ನೀಡುವ ಘಟಕಗಳ ಸಂಖ್ಯೆ ______ ಪಟ್ಟಣದ ______ ಗ್ರಾಮೀಣ ______

ಬಂದ ವರದಿಗಳ ಸಂಖ್ಯೆ ______ ಪಟ್ಟಣದ ______ ಗ್ರಾಮೀಣ ______

**ಅ. ನಿಗಾವಣೆ**

| ಕಾಯಿಲೆ | ವರದಿಯಾದ ಸಂಖ್ಯೆ | | | |
|---|---|---|---|---|
| | ಈ ತಿಂಗಳಲ್ಲಿಯು | | ಏಪ್ರಿಲ್‌ನಿಂದ ಒಟ್ಟು | |
| | ಪ್ರಕರಣಗಳು | ಮರಣಗಳು | ಪ್ರಕರಣಗಳು | ಮರಣಗಳು |
| ಗಂಟಲುಮಾರಿ | | | | |
| ನಾಯಿಕೆಮ್ಮು | | | | |
| ನವಜಾತರಲ್ಲಿ ಧನುರ್ವಾಯು | | | | |
| ಉಳಿದವರಲ್ಲಿ ಧನುರ್ವಾಯು | | | | |
| ನರಮಜ್ಜೆರೋಗ (ತೀವ್ರ) (ಪೋಲಿಯೋ) | | | | |
| ಕ್ಷಯರೋಗ | | | | |
| ವಿಷಮಶೀತಜ್ವರ | | | | |
| ದಡಾರ | | | | |

## ಋ. ಲಸಿಕೆ ನೀಡಿಕೆ ಸಾಧನೆ

| ಲಸಿಕೆ | (ಡೋಸ್) ವರಸೆ | ತಿಂಗಳಲ್ಲಿ ಫಲಾನುಭವಿಗಳ ಸಂಖ್ಯೆ | ಏಪ್ರಿಲ್‌ನಿಂದ ಫಲಾನುಭವಿಗಳ ಒಟ್ಟು ಸಂಖ್ಯೆ |
|---|---|---|---|
| ಟಿಟಿ | 1 | | |
| (ಗರ್ಭಿಣಿಯರು) | 2 | | |
| | ವ | | |
| ಶಿಶುಗಳು | 1 | | |
| ಡಿಪಿಟಿ | 2 | | |
| 3 ರಿಂದ 12 ತಿಂಗಳು | 3 | | |
| 18 ರಿಂದ 24 ತಿಂಗಳು | ವ | | |
| ಪೋಲಿಯೋ | 1 | | |
| 3 ರಿಂದ 12 ತಿಂಗಳು | 2 | | |
| 18 ರಿಂದ 24 ತಿಂಗಳು | 3 | | |
| | ವ | | |
| ಬಿ.ಸಿ.ಜಿ. 3 ರಿಂದ 12 ತಿಂಗಳು | 1 | | |
| ದಡಾರ | 1 | | |
| 9 ರಿಂದ 12 ತಿಂಗಳು | | | |
| ಮಕ್ಕಳು | | | |
| ಡಿಟಿ | 1 | | |
| (ಶಾಲಾಪೂರ್ವ) | 2 | | |
| ಡಿಟಿ | 1 | | |
| (5 ವರ್ಷಗಳು) | ? \|ವ | | |
| ಟೈಫಾಯಿಡ್ | 1 | | |
| (5 ವರ್ಷಗಳು) | 2 | | |
| ಟಿಟಿ | 1 | | |
| (10 ವರ್ಷಗಳು) | 2/ವ | | |
| ಟಿಟಿ | 1 | | |
| (16 ವರ್ಷಗಳು) | 2/ವ | | |
| ಟೈಫಾಯಿಡ್ | 1 | | |
| 10 ವರ್ಷ | 2/ವ | | |
| ಟೈಫಾಯಿಡ್ | 1 | | |
| 16 ವರ್ಷ | [illegible] | | |

ಕ. ಲಸಿಕೆಯ ಸರಬರಾಜು (ಡೋಸ್ ಪ್ರಮಾಣಗಳ ಸಂಖ್ಯೆ)

| ಲಸಿಕೆ | ತಿಂಗಳ ಪ್ರಾರಂಭದಲ್ಲಿದ್ದ ದಾಸ್ತಾನು | ಬಂದದ್ದು | ಬಳಸಿದ್ದು | ತಿಂಗಳ ಕೊನೆಗೆ ಉಳಿದದ್ದು |
|---|---|---|---|---|
| ಡಿಪಿಟಿ | | | | |
| ಪೋಲಿಯೊ | | | | |
| ಬಿಸಿಜಿ | | | | |
| ಡಿಟಿ | | | | |
| ಟೈಫಾಯಿಡ್ | | | | |
| ಟಿಟಿ (ಮಕ್ಕಳಿಗೆ) | | | | |
| ಟಿಟಿ (ಗರ್ಭಿಣಿಯರಿಗೆ) | | | | |
| ಷರಾ | | | | |

ಡ. ಶೀತಕಗಳು (ಸಂಖ್ಯೆ)

ಜಿಲ್ಲಾ ಕೇಂದ್ರದಲ್ಲಿ ಒಟ್ಟು ________ ಕೆಲಸಮಾಡುತ್ತಿರುವ ________

ಆರೋಗ್ಯ ಕೇಂದ್ರಗಳಲ್ಲಿ ಒಟ್ಟು ________ ಕೆಲಸಮಾಡುತ್ತಿರುವ ________

ಗ ವರದಿಮಾಡಿದ ವಿಪರೀತ ಪ್ರತಿಕ್ರಿಯೆಗಳು

ಕೀವಿನಪ್ರಸಂಗ

ಇತರೆ (ವಿವರಿಸಿ)

ದಿನಾಂಕ :

ಜಿಲ್ಲಾ ಆರೋಗ್ಯಾಧಿಕಾರಿ/

ಪ್ರಾಧ್ಯಾಪಕರು, ಪ್ರತಿಬಂಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ/ಶಿಶು ವೈದ್ಯ ಶಾಸ್ತ್ರ ವಿಭಾಗ ವೈದ್ಯಕೀಯ ಮಹಾ ವಿದ್ಯಾಲಯ

ಇವರಿಗೆ

1. ಸಹಾಯಕ ಕಮಿಷನರರು (ಇಮ್ಯುನೈಜೇಷನ್) ಕುಟುಂಬ ಕಲ್ಯಾಣ ಇಲಾಖೆ.
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ
   ನಿರ್ಮಾಣ ಭವನ, ನವ ದೆಹಲಿ 110011

2. ರಾಜ್ಯ, ವಿಸ್ತರಿತ ಲಸಿಕೆ ನೀಡುವ ಕಾರ್ಯಕ್ರಮಾಧಿಕಾರಿ
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ
   ಆನಂದರಾವ್ ವೃತ್ತ, ಬೆಂಗಳೂರು -560009.

## ಸಾರ್ವತ್ರಿಕ ಲಸಿಕೆ ನೀಡುವ ಕಾರ್ಯಕ್ರಮ

## ಮೇಲ್ವಿಚಾರಣಾ ಪರಿಶೀಲನಾ ಪಟ್ಟಿ

ತಿಂಗಳು ______________ ಕೋಡ್ ______________

ರಾಜ್ಯ ______________ ______________ ಜಿಲ್ಲೆ ______________ ವೈ ಮ ವಿ

ಜಿಲ್ಲೆ ______________ /ವೈದ್ಯಕೀಯ ಮಹಾ ವಿದ್ಯಾಲಯ ______________

ಸಂದರ್ಶಿಸಿದ ಸಂಸ್ಥೆ/ಘಟಕ

| ಕ್ರಮಾಂಕ | ಅಂಶಗಳು | ವಿಧಾನ | ಸಮಸ್ಯೆಯ ಸೂಚಿಗಳು | ಟಿಪ್ಪಣಿಗಳು |
|---|---|---|---|---|
| 1. | ಲಸಿಕೆ ನೀಡಿದವರ ಸಂಖ್ಯೆ | ದಾಖಲೆ ಪರೀಕ್ಷಿಸಿ<br>ಸ್ಥಳ ಪರೀಕ್ಷಿಸಿ | ಸಮಾಂತರ ಗುರಿಗಿಂತ ಕಡಿಮೆ ಸಾಧನೆ | |
| 2. | ವಯಸ್ಸು | ಮೇಲ್ಕಂಡಂತೆ | 1 ವರ್ಷ ಮೇಲ್ಪಟ್ಟ ಮಕ್ಕಳಿಗೆ ಶೇಕಡ 10 ಕ್ಕಿಂತ ಹೆಚ್ಚು ಡಿಪಿಟಿ ಮತ್ತು ಪೋಲಿಯೊ ನೀಡುವುದು. | |
| 3. | ಹೊರ ಬೀಳುವವರ ಪ್ರಮಾಣ | ಮೇಲ್ಕಂಡಂತೆ | ಮೊದಲ ಡೋಸ್‌ನಿಂದ ಮೂರನೆ ಡೋಸಿಗೆ ಶೇಕಡ 10ಕ್ಕಿಂತ ಹೆಚ್ಚು ಹೊರಬೀಳುವುದು. | |
| 4. | ಬಳಕೆ | ಲಸಿಕೆಯ ದಾಸ್ತಾನನ್ನು ಪರೀಕ್ಷಿಸಿ | ಸಾಧನೆಯ ವರದಿಗಳಿಗಿಂತ ಕಡಿಮೆ ಲಸಿಕೆಯ ಉಪಯೋಗ | |
| 5. | ದಾಸ್ತಾನು | ದಾಖಲೆ ಪರೀಕ್ಷೆ<br>ದಾಸ್ತಾನನ್ನು ಪ್ರಮಾಣಿಸಿ | ಆರೋಗ್ಯ ಕೇಂದ್ರಗಳಲ್ಲಿ ಒಂದು ತಿಂಗಳ ಅವಶ್ಯಕತೆಗಿಂತ ಹೆಚ್ಚಿನ ದಾಸ್ತಾನು ಜಿಲ್ಲೆ ಮತ್ತು ರಾಜ್ಯಗಳಲ್ಲಿ ದಾಸ್ತಾನುಗಳಲ್ಲಿ 3 ತಿಂಗಳ ಅವಶ್ಯಕತೆಗಿಂತ ಹೆಚ್ಚಿನ ದಾಸ್ತಾನು. ಜಿಲ್ಲೆ ಮತ್ತು ರಾಜ್ಯಗಳಲ್ಲಿ ದಾಸ್ತಾನು ಇಲ್ಲದಿರುವುದು. ಕೊನೆಯ ದಿನ ಮುಗಿದ ಲಸಿಕೆಗಳು | |
| 6. | ದಾಸ್ತಾನಿನ ವಿಧಾನ | ಉಷ್ಣಾಂಶ ದಾಖಲೆ ಮತ್ತು ಶೀತಕವನ್ನು ಪರೀಕ್ಷಿಸಿ | ಉಷ್ಣಾಂಶ ದಾಖಲೆ ಇಟ್ಟಿರದಿರುವುದು ಮೇಲಿಂದ ಮೇಲೆ8 ಸೆ. ಗಿಂತ ಹೆಚ್ಚು ಉಷ್ಣಾಂಶ ಇರುವುದು ಶೀತಕದ ಬಾಗಿಲನ್ನು ಅನಧಿಕೃತ ವ್ಯಕ್ತಿಗಳು ಮೇಲಿಂದ ಮೇಲೆ ತೆಗೆಯುವುದು ಹಿಮಘಟಕದ ಕೋಣೆಯ ಸುತ್ತಲೂ ಮಂಜಿನ ದಪ್ಪ ಪೊರೆ ಇರುವುದು ಲಸಿಕೆಗಳನ್ನು ಅಸ್ತವ್ಯಸ್ತವಾಗಿಟ್ಟಿರುವುದು ಬಾಗಿಲಲ್ಲಿ ಲಸಿಕೆ ಇಟ್ಟಿರುವುದು | |
| 7. | ಸರಬರಾಜು | ದಾಖಲೆಗಳನ್ನು ಪರೀಕ್ಷಿಸಿ<br>ಸಿಬ್ಬಂದಿಗಳನ್ನು ಪ್ರಶ್ನಿಸಿ | ದೈನಂದಿನ ಅವಶ್ಯಕತೆಗಿಂತ ಹೆಚ್ಚಿನ ಲಸಿಕೆಯನ್ನು ಕ್ಷೇತ್ರಕ್ಕೆ ತೆಗೆದುಕೊಂಡು | |

| | | | |
|---|---|---|---|
| | | ನಿರೀಕ್ಷಣೆ | ಹೋಗುವುದು<br>ದಿನದ ಆವಶ್ಯಕತೆಗಿಂತ ಕಡಿಮೆ ಲಸಿಕೆ<br>ಯನ್ನು ಕ್ಷೇತ್ರಕ್ಕೊಯ್ಯುವುದು ಮಂಜಿನ<br>ಒತ್ತೆಗಳನ್ನು ಸರಿಯಾಗಿ ಹಿಮಗಟ್ಟಿಸ<br>ದಿರುವುದು |
| 8. | ಲಸಿಕೆ<br>ನೀಡುವ<br>ಸಂದರ್ಭಗಳು | ನಿರೀಕ್ಷಣೆ<br>ಚರ್ಚೆ | ನಿರೀಕ್ಷೆಗಿಂತ ಕಡಿಮೆ ಹಾಜರಿ<br>ಲಸಿಕೆ ನೀಡುವ ದಿನಗಳನ್ನು ಮೇಲಿಂದ<br>ಮೇಲೆ ಜನರಿಗೆ ತಿಳಿಸದೆ ಬದಲಿಸುವುದು<br>ಸಂಸ್ಕರಿಸೆದ ಉಪಕರಣಗಳನ್ನುಪ<br>ಯೋಗಿಸುವುದು ಜನರ ಅವ್ಯವಸ್ಥಿತ<br>ಓಡಾಟ ಒಂದು ಸಮಯದಲ್ಲಿ ಒಂದೇ<br>ಲಸಿಕೆಯ ಒಂದಕ್ಕಿಂತ ಹೆಚ್ಚು ಸೀಸೆ<br>ತೆಗೆದಿಟ್ಟಿರುವುದು ವಯಾಲ್‌ಗಳನ್ನು<br>ಮಂಜು ಒತ್ತೆ ಅಥವಾ ಮಂಜುಗಡ್ಡೆ<br>ಗಳಿರುವ ಬಟ್ಟಲಲ್ಲಿ ಇಟ್ಟಿರದಿರುವುದು<br>ಲಸಿಕೆಯನ್ನು ಸೂರ್ಯನ ಬೆಳಕಿಗೆ<br>ತೆರೆದಿಟ್ಟಿರುವುದು. ಲಸಿಕೆಯ ವೇಳಾ<br>ಪಟ್ಟಿ, ಪ್ರತಿಕ್ರಿಯೆಗಳು ಮತ್ತು<br>ಮುಂದಿನ ಭೇಟಿಯ ಮಾಹಿತಿಗಳನ್ನು<br>ಸಮುದಾಯಕ್ಕೆ, ತಿಳಿಸದಿರುವುದು<br>ಸಿಬ್ಬಂದಿಯ ಅಸೌಜನ್ಯ ವರ್ತನೆ<br><br>ಲಸಿಕೆ ಕೊಡಬೇಕಾದ ಸರಿಯಾದ<br>ತಾಂತ್ರಿಕತೆಯನ್ನು ಅನುಸರಿಸದಿರುವುದು |
| 9. | ಪ್ರತಿಕ್ರಿಯೆಗಳು | ಪ್ರಶ್ನಿಸಿ<br>ಮಕ್ಕಳನ್ನು ಪರೀಕ್ಷಿಸಿ | ಕೀವಾಗುವುದು<br>ತೀವ್ರ ಸ್ವರೂಪದ ಪ್ರತಿಕ್ರಿಯೆಗಳು |
| 10. | ಪರಿಣಾಮ | ದಾಖಲೆಗಳನ್ನು ಪರೀಕ್ಷಿಸಿ<br>ಜನ ಮತ್ತು ಸಿಬ್ಬಂದಿ<br>ಯನ್ನು ಪ್ರಶ್ನಿಸಿ<br>ಮಕ್ಕಳನ್ನು ಪರೀಕ್ಷಿಸಿ | ಲಸಿಕೆ ನೀಡಿದ ಮಕ್ಕಳಲ್ಲಿ ವರದಿಯಾದ<br>ಕಾಯಿಲೆಯ ಪ್ರಸಂಗಗಳು |

ದಿನಾಂಕ

ಹೆಸರು ಮತ್ತು ಹುದ್ದೆ
(ದೊಡ್ಡಕ್ಷರಗಳಲ್ಲಿ)

ಗಾವರಿಗೆ

1. ಸಹಾಯಕ ಕಮಿಷನರರು (ಇಮ್ಯುನೈಜೇಷನ್)
   ಕುಟುಂಬ ಕಲ್ಯಾಣ ಇಲಾಖೆ
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ
   ನಿರ್ಮಾಣ ಭವನ ನವದೆಹಲಿ - 110011.

2. ರಾಜ್ಯ ವಿಸ್ತರಿತ ಲಸಿಕಾ ವಿಭಾಗದ ಕಾರ್ಯಕ್ರಮಾಧಿಕಾರಿಗಳು
   ಆರೋಗ್ಯ ಮತ್ತು ಕುಟುಂಬಕಲ್ಯಾಣ ನಿರ್ದೇಶನಾಲಯ
   ಆನಂದರಾವ್ ವೃತ್ತ ಬೆಂಗಳೂರು -560009

# ವಿಸ್ತರಿತ ಲಸಿಕೆ ನೀಡುವ ಕಾರ್ಯಕ್ರಮ

## ಮೇಲ್ವಿಚಾರಣಾ ನಮೂನೆ

| ಜಿಲ್ಲಾ ಸಂಖ್ಯೆ. | ರಾಜ್ಯ | ಜಿಲ್ಲೆ |
|---|---|---|
| 0101 | ಆಂಧ್ರಪ್ರದೇಶ | ಚಿತ್ತೂರು |
| 0102 | ಆಂಧ್ರಪ್ರದೇಶ | ಕಡಪ್ಪ |
| 0203 | ಅಸ್ಸಾಂ | ಕಾಮರೂಪ |
| 0304 | ಬಿಹಾರ | ಕಾಟಿಹಾರ |
| 0305 | ಬಿಹಾರ | ಪೂರ್ನಿಯಾ |
| 0406 | ಗುಜರಾತ್ | ಖೇಡಾ |
| 0402 | ಗುಜರಾತ್ | ಭಾರುಚ |
| 0508 | ಹರ್ಯಾಣ | ಕುರುಕ್ಷೇತ್ರ |
| 0609 | ಹಿಮಾಚಲಪ್ರದೇಶ | ಸಿರಿಮುರ |
| 0610 | ಹಿಮಾಚಲಪ್ರದೇಶ | ಹಮಿರಪುರ |
| 0711 | ಜಮ್ಮು ಮತ್ತು ಕಾಶ್ಮೀರ | ಅನಂತನಾಗ |
| 0812 | ಕರ್ನಾಟಕ | ಹಾಸನ |
| 0813 | ಕರ್ನಾಟಕ | ಕೋಲಾರ |
| 0914 | ಕೇರಳ | ಪಾಲಘಾಟ |
| 0915 | ಕೇರಳ | ಇಡುಕ್ಕಿ |
| 1016 | ಮಧ್ಯಪ್ರದೇಶ | ಸಾಗರ |
| 1017 | ಮಧ್ಯಪ್ರದೇಶ | ಗ್ವಾಲಿಯರ |
| 1118 | ಮಹಾರಾಷ್ಟ್ರ | ನಾಂದೇಡ |
| 1119 | ಮಹಾರಾಷ್ಟ್ರ | ಥಾಣೆ |
| 1520 | ಒರಿಸ್ಸಾ | ಪುರಿ |
| 1521 | ಒರಿಸ್ಸಾ | ಕಟಕ್ |

| ಜಿಲ್ಲಾ ಸಂಖ್ಯೆ | ರಾಜ್ಯ | ಜಿಲ್ಲೆ |
|---|---|---|
| 1622 | ಪಂಜಾಬ | ಸಂಗ್ರೂರ |
| 1623 | ಪಂಜಾಬ | ಬಟಿಂಡಾ |
| 1724 | ರಾಜಸ್ಥಾನ | ಕೋಟಾ |
| 1725 | ರಾಜಸ್ಥಾನ | ಭರತಪುರ |
| 2026 | ತಮಿಳುನಾಡು | ಮಧುರೈ |
| 2027 | ತಮಿಳುನಾಡು | ಸೇಲಂ |
| 2228 | ಉತ್ತರಪ್ರದೇಶ | ವಾರಣಾಸಿ |
| 2229 | ಉತ್ತರಪ್ರದೇಶ | ದಯೋರಿಯಾ |
| 2330 | ಪಶ್ಚಿಮಬಂಗಾಳ | ನಾಡಿಯಾ |
| ಒಟ್ಟು : | | |

